# "ಸ್ತ್ರೀವಾದಿ ದೃಷ್ಟಿಕೋನದಲ್ಲಿ ಪ್ರಾಚೀನ ಕಥಾವಸ್ತುವಿನ ನಿರ್ವಹಣೆ"

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ


ನಿಬಂಧಕಾರರು

**ಸರಸ್ವತಿ**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಪ್ರಧಾನ ಗುರುದತ್ತ**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಭಾಷಾಭಾರತಿ ಅಧ್ಯಕ್ಷರು
ಬೆಂಗಳೂರು








ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೮-೦೯

# “ಸ್ತ್ರೀವಾದಿ ದೃಷ್ಟಿಕೋನದಲ್ಲಿ ಪ್ರಾಚೀನ ಕಥಾವಸ್ತುವಿನ ನಿರ್ವಹಣೆ”

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ನಿಬಂಧಕಾರರು

**ಸರಸ್ವತಿ**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು



ಮಾರ್ಗದರ್ಶಕರು

**ಡಾ. ಪ್ರಧಾನ ಗುರುದತ್ತ**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಭಾಷಾಭಾರತಿ ಅಧ್ಯಕ್ಷರು
ಬೆಂಗಳೂರು



**ಕನ್ನಡ ವಿಶ್ವವಿದ್ಯಾಲಯ, ಹಂಪಿ**
೨೦೦೮-೦೯

# ದೃಢೀಕರಣಪತ್ರ

೨೦೦೮–೦೯ನೇ ಸಾಲಿನಲ್ಲಿ ಕ್ರಮ ಸಂಖ್ಯೆ KVTMKS - 00326 ರ ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿನಿಯಾದ ಸರಸ್ವತಿ ಅವರು ನನ್ನ ಮಾರ್ಗದರ್ಶನದಲ್ಲಿ **"ಸ್ತ್ರೀವಾದಿ ದೃಷ್ಟಿಕೋನದಲ್ಲಿ ಪ್ರಾಚೀನ ಕಥಾವಸ್ತುವಿನ ನಿರ್ವಹಣೆ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ದಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಪ್ರಧಾನ ಗುರುದತ್ತ

**(ಡಾ. ಪ್ರಧಾನ ಗುರುದತ್ತ)**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಭಾಷಾಭಾರತಿ ಅಧ್ಯಕ್ಷರು

ಮೈಸೂರು
ದಿನಾಂಕ: 30.09.09.

# ಅಭ್ಯರ್ಥಿಯ ಘೋಷಣಾಪತ್ರ

**"ಸ್ತ್ರೀವಾದಿ ದೃಷ್ಟಿಕೋನದಲ್ಲಿ ಪ್ರಾಚೀನ ಕಥಾವಸ್ತುವಿನ ನಿರ್ವಹಣೆ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KVTMKS - 00326 ರ ವಿದ್ಯಾರ್ಥಿಯಾದ ನಾನು ೨೦೦೮-೦೯ನೇ ಸಾಲಿನ ಪರೀಕ್ಷೆಗಾಗಿ **ಡಾ. ಪ್ರಧಾನ ಗುರುದತ್ತ ನಿವೃತ್ತ ಕನ್ನಡ ಪ್ರಾಧ್ಯಾಪಕರು, ಕುವೆಂಪು ಭಾಷಾಭಾರತಿ ಅಧ್ಯಕ್ಷರು, ಬೆಂಗಳೂರು** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸರಸ್ವತಿ.
(ಸರಸ್ವತಿ)

ಮೈಸೂರು
ದಿನಾಂಕ : 30.09.09

ಪ್ರ೦೦೮-೦೯ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿನಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಪ ರಿ ವಿ ಡಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಸಾಹಿತ್ಯ** ಭೂತಕಾಲದ ಇತಿಹಾಸವನ್ನು ವರ್ತಮಾನದ ಕಥೆಯನ್ನು ಹೇಳುವುದರ ಜೊತೆಗೆ ಭವಿಷ್ಯದ ಕನಸ್ಸನ್ನು ಕೊಟ್ಟಿಕೊಡುವ ಪ್ರತಿಭಾಜನ್ಯ ಅಸಾಮಾನ್ಯ ಸೃಷ್ಟಿ. ಸಾಹಿತ್ಯ ಮಾನವನ ಬದುಕನ್ನು ಪ್ರತಿಫಲಿಸುವ ಕನ್ನಡಿ; ಜೀವನದ ಬಿಂಬ. ಸಾಹಿತ್ಯ ಸಮಾಜದಲ್ಲಿ ಘಟಿಸುವ ಏರುಪೇರುಗಳನ್ನು ಬದಲಾಯಿಸುವ, ಪುನಾರಚಿಸುವ ಒಂದು ಸಾಧನವಾಗಿ ಪರಿಣಮಿಸಿದೆ. ಸಾಹಿತ್ಯದಲ್ಲಿ ಎಷ್ಟೇ ವಸ್ತುನಿಷ್ಠ ಅಧ್ಯಯನ ಪಡೆದರೂ ಅದು ಕೊನೆ ಮುಟ್ಟುವುದು ಸಮಾಜ ಕುರಿತ ಚಿಂತನೆಯಲ್ಲೇ. ಸಮಾಜ ಇತರ ಎಲ್ಲಾ ಜ್ಞಾನ ಶಾಖೆಗಳಗೂ ಕೇಂದ್ರ ಸ್ಥಾನವಾಗಿದೆ. ಆದುದರಿಂದ ಸಮಾಜ ಸಾಹಿತ್ಯಕ್ಕೆ ಒಂದು ಮುಖ್ಯ ಆಕರ.

ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಸ್ಥಾನ ಪಡೆದು ತನ್ನ ನೆಲೆಯನ್ನು ಗುರುತಿಸಿಕೊಂಡು ಮಹಿಳಾ ಸಾಹಿತ್ಯ ಬೆಳೆದಿದೆ; ಬೆಳೆಯುತ್ತಿದೆ. ಇದು ಮಹಿಳಾ ಶೋಷಣೆಯ, ಅಸಮಾನತೆಯ ವಿರುದ್ಧ ಧ್ವನಿಯೆತ್ತಿ ಹೊಸ ವ್ಯವಸ್ಥೆ ಮೌಲ್ಯಗಳ ಪ್ರತಿಪಾದನೆಗೆ ಹಾತೊರೆಯುತ್ತಿದೆ. ಮಹಿಳಾ ಸಾಹಿತ್ಯದ ಬೆಳವಣಿಗೆಯನ್ನು ಸ್ತ್ರೀತ್ವ, ಸ್ತ್ರೀವಾದಿತ್ವ, ಸ್ತ್ರೀಯಾತ್ಮಕತೆ ಎಂಬ ಮೂರು ಪ್ರಧಾನ ಹಂತಗಳಲ್ಲಿ ಸ್ತ್ರೀವಾದಿ ವಿಮರ್ಶಕರು ಗುರುತಿಸುತ್ತಾರೆ. ಲೇಖಕಿಯರ ಕೃತಿಯಲ್ಲಿ ಕ್ರಮೇಣ ವಿಕಾಸ ಹೊಂದಿದ ಸ್ತ್ರೀ ಪರಿಕಲ್ಪನೆಯನ್ನು ಈ ಹಂತಗಳಲ್ಲಿ ಕಾಣಬಹುದು. ಮೊದಲ ಹಂತದ ಮಹಿಳಾ ಸಾಹಿತ್ಯ ಪಿತೃಪ್ರಧಾನ ಸಂಸ್ಕೃತಿ ಕೊಟ್ಟ ಮಹಿಳೆಯ ಪರಿಕಲ್ಪನೆಯನ್ನು ಪ್ರಶ್ನಿಸದೆ ಸ್ವೀಕರಿಸುತ್ತದೆ. ಸ್ತ್ರೀಯರ ಸಲುವಾಗಿ ರೂಪಿಸಿದ ಮೌಲ್ಯಗಳನ್ನೆಲ್ಲಾ ತಮ್ಮದೆಂದು ಒಪ್ಪುತ್ತದೆ. ಇಲ್ಲಿ ಪುರುಷ ವರ್ಗದ ದೃಷ್ಟಿಕೋನದ ಪಾರಂಪರಿಕ ಹೆಣ್ಣಿನ ಸಿದ್ಧಮಾದರಿಗಳ ಅನುಕರಣೆ ಇರುತ್ತದೆ. ಎರಡನೆಯ ಹಂತದಲ್ಲಿ ಮಹಿಳಾ ಸಾಹಿತ್ಯದ ಹೆಚ್ಚಿನ ಶಕ್ತಿಯೆಲ್ಲ, ಸಿದ್ಧಮಾದರಿ ಮತ್ತು ಮಾನದಂಡಗಳ ವಿರುದ್ಧ ಪ್ರತಿಭಟನೆಗಳಿಗಾಗಿ ವ್ಯಯವಾಗುತ್ತದೆ. ಆಕ್ರೋಶ ನೋವುಗಳು ಪ್ರಧಾನವಾಗಿರುತ್ತವೆ. ಮೊದಲನೆ ಹಂತದಲ್ಲಿ ಒಪ್ಪಲಾದ ಮೌಲ್ಯಗಳ ಅಪಾಯದ ಅರಿವು ಎರಡನೆಯ ಹಂತದಲ್ಲಿ ಉಂಟಾಗಿರುತ್ತದೆ. ಮೂರನೆಯದಾಗಿ ಸ್ತ್ರೀಯಾತ್ಮಕತೆಯ ಹಂತದಲ್ಲಿ ಮಹಿಳೆ ತನ್ನನ್ನು ತಾನು ಶೋಧಿಸಕೊಳ್ಳುವ, ಅಸ್ತಿತ್ವವನ್ನು ಗುರುತಿಸಿಕೊಳ್ಳುವ, ಅಭಿವ್ಯಕ್ತಿಗೊಳಿಸುವ ಸಾಮರ್ಥ್ಯವನ್ನು ಪಡೆಯುತ್ತಾಳೆ. ಹೀಗೆ ಬೆಳೆದ ಮಹಿಳಾ ಸಾಹಿತ್ಯ ಕಾದಂಬರಿ, ಕಥೆ, ನಾಟಕ, ಕಾವ್ಯ, ವಿಮರ್ಶೆ ಮುಂತಾದ ಪ್ರಕಾರಗಳಲ್ಲಿ ಹರಿದುಬಂದಿದೆ.

ಕಾದಂಬರಿ ಕಥೆ, ಕಾವ್ಯ, ನಾಟಕಗಳಿಗಿಂತಲೂ ಪರಿಪೂರ್ಣವೂ, ವಿಸ್ತಾರವೂ ಆದ ಮಾಧ್ಯಮ. ಸರ್ವರಿಗೂ ಪ್ರಿಯವಾದ ಈ ಸಾಹಿತ್ಯಕ ಮಾಧ್ಯಮದಲ್ಲಿ ಸಾಹಿತಿ ತಾನು ಕಂಡು ಅನುಭವಿಸಿದ ಕೇಳಿದ ಘಟನೆಗಳನ್ನು ವ್ಯಾಪಕವಾಗಿ ದಾಖಲಿಸಲು

ಬಯಸುತ್ತಾನೆ. ಪ್ರಾಚೀನ ಕಥಾ ವಸ್ತುಗಳಾದ ರಾಮಾಯಣ, ಮಹಾಭಾರತವನ್ನು ಸಮಕಾಲೀನ ಕನ್ನಡಿಯಲ್ಲಿ ಪ್ರತಿಫಲಿಸಲು ಅನುಕೂಲಕರವಾದ ಮಾಧ್ಯಮ ಕಾದಂಬರಿ. ಅಂತೆಯೇ ರಾಮಾಯಣ, ಮಹಾಭಾರತಗಳನ್ನು ಕಥಾವಸ್ತುವನ್ನಾಗಿಸಿಕೊಂಡು ಅನೇಕ ಕಾದಂಬರಿಗಳು ಮೈತಳೆದಿವೆ. ಪ್ರಸ್ತುತ ಪ್ರಬಂಧಕ್ಕಾಗಿ ಡಾ.ಅನುಪಮ ನಿರಂಜನ ಅವರ 'ಮಾಧವಿ' ಹಾಗೂ ಎಂ.ಎಸ್.ವೇದಾ ಅವರ 'ಜಯ' ಕಾದಂಬರಿಗಳನ್ನು ಆಯ್ಕೆಮಾಡಿಕೊಂಡಿದ್ದೇನೆ. ಈ ಎರಡೂ ಕಾದಂಬರಿಗಳ ವಸ್ತು ಮಹಾಭಾರತದ್ದಾಗಿದೆ. ಈ ಎರಡೂ ಕಾದಂಬರಿಗಳಲ್ಲಿಯೂ ಅಭಿವ್ಯಕ್ತಗೊಂಡಿರುವ ಪ್ರಾಚೀನ ಕಥಾವಸ್ತುವನ್ನು ಸ್ತ್ರೀವಾದಿ ದೃಷ್ಟಿಕೋನದಲ್ಲಿ ಶೋಧಿಸುವುದು ಈ ಸಂಶೋಧನೆಯ ಮುಖ್ಯ ಉದ್ದೇಶ.

ಸಾವಿರಾರು ವರ್ಷಗಳಿಂದ ಕಾವ್ಯಕೃತಿಯಾಗಿ ನಿರ್ಮಾಣಗೊಂಡು ಮೇರುಕೃತಿಯಾದ ವ್ಯಾಸಭಾರತವನ್ನು ಅದರ ವಸ್ತು ಪಾತ್ರಗಳನ್ನು ಮೂಲಕ್ಕಿಂತ ಭಿನ್ನವಾಗಿ, ತತ್ಕಾಲೀನ ಕಾವ್ಯಗಳಲ್ಲಿ, ಕೃತಿಗಳಲ್ಲಿ, ಕಾದಂಬರಿಗಳಲ್ಲಿ ಆಯಾಯಾ ಕಾಲಕ್ಕೆ ತಕ್ಕಂತೆ ತಮ್ಮ ದೃಷ್ಟಿಕೋನಗಳಿಗೆ ಅನುಗುಣವಾಗಿ ಸಾಹಿತಿಗಳು ಬಿಂಬಿಸುತ್ತಾ ಬಂದಿದ್ದಾರೆ. ಇದು ಕವಿಗಳಿಗೆ ಅಕ್ಷರ ಆಕಾರವಾಗಿದೆ ಎನ್ನುವುದಕ್ಕಿಂತಲೂ ಸಂಸ್ಕೃತ ಮತ್ತು ದೇಶ ಭಾಷೆಗಳಲ್ಲಿ ಇದನ್ನು ಆಧರಿಸಿ ಬರೆಯಲ್ಪಟ್ಟಿರುವ ಸಾಹಿತ್ಯದ ಬಹು ಪ್ರಕಾರಗಳು ಮನೋಜ್ಞವಾಗಿದೆ ಎನ್ನಬಹುದು. ಭಾಸ ಕವಿಯ ದೂತವಾಕ್ಯ, ದೂತಘಟೋತ್ಕಚ ಪಂಚರಾತ್ರ, ಊರುಭಂಗ, ಮಧ್ಯಮವ್ಯಾಯೋಗ, ಕಾಳಿದಾಸನ ಅಭಿಜ್ಞಾನ ಶಾಂಕುಂತಲ, ಭಟ್ಟ ನಾರಾಯಣನ ವೇಣೀ ಸಂಹಾರ, ಶ್ರೀಹರ್ಷನ ನೈಷದೀಯ, ಭಾರವಿಯ ಕಿರಾತಾರ್ಜುನೀಯ, ಅನಂತಭಟ್ಟನ ಭಾರತ ಚಂಪೂ, ಪಂಪನ ವಿಕ್ರಮಾರ್ಜುನವಿಜಯ, ರನ್ನನ ಗದಾಯುದ್ಧಂ, ನಾರಣಪ್ಪನ ಗದುಗಿನಭಾರತ ಹೀಗೆ ಇವುಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಅಷ್ಟೇ ಅಲ್ಲ ಪ್ರಪಂಚದ ಎಲ್ಲ ಭಾಷೆಗಳಲ್ಲಿಯೂ ಮಹಾಭಾರತದ ಅನುವಾದವಾಗಿದೆ ಎಂಬುದು ಗಮನಾರ್ಹ.

ಆಧುನಿಕ ಕಾಲದಲ್ಲಿಯೂ 'ಮಹಾಭಾರತ' ಹೊಸ ಬಗೆಯ ಚಿಂತನೆಗೊಳಪಟ್ಟಿದೆ. ಕುವೆಂಪು (ಸ್ಮಶಾನಕುರುಕ್ಷೇತ್ರ), ಎಸ್.ಎಲ್.ಭೈರಪ್ಪ (ಪರ್ವ), ಸುಜನಾ (ಯುಗಾಂತ) ಮುಂತಾದವುಗಳನ್ನೊಳಗೊಂಡಂತೆ ಅನೇಕ ಲೇಖಕರು ನಾಟಕ, ಕಾವ್ಯ, ಕಾದಂಬರಿಗಳಲ್ಲಿ ಭಾರತವು ಹೊಸ ರೂಪ, ಚಿಂತನೆಗಳ ಮೂಲಕ ಕನ್ನಡಿಗರಿಗೆ ಲಭ್ಯವಾಗುವಂತೆ ಮಾಡಿದ್ದಾರೆ. ಮಹಿಳಾ ಸಾಹಿತಿಗಳು ಈ ವಿಷಯಕ್ಕೆ ಹೊರತಲ್ಲ ಎಸ್.ವಿ.ಪ್ರಭಾವತಿ (ದ್ರೌಪತಿ), ಜಯದೇವಿ.ಎಂ.ಗಾಯಕ್‌ವಾಡ್ (ಯಜ್ಞಸೇನಿ), ಡಾ.ಅನುಪಮನಿರಂಜನ (ಮಾಧವಿ), ಎಂ.ಎಸ್.ವೇದಾ (ಜಯ) ಮೊದಲಾದವರು ಮಹಾಭಾರತವನ್ನು ವಿಶಿಷ್ಟ ರೀತಿಯಲ್ಲಿ ಕಂಡಿರಿಸಿದ್ದಾರೆ. ಅಲ್ಲದೆ

ಮಾಧವಿ ಭಂಡಾರಿ ಅವರಂಥ ಅನೇಕ ಅನ್ಯಭಾಷೆಯ ಲೇಖಕಿಯರು ಮಹಾಭಾರತವನ್ನು ವಸ್ತುವನ್ನಾಗಿಸಿಕೊಂಡು ಕೃತಿ ರಚಿಸಿದ್ದಾರೆ.

ಡಾ. ಅನುಪಮ ನಿರಂಜನ ಅವರ 'ಮಾಧವಿ' ಮಹಾಭಾರತದಲ್ಲಿ ಬರುವ ಉಪಕತೆಯಾಗಿದೆ. ಮಾಧವಿಯ ಪಾತ್ರವನ್ನು ಕಾದಂಬರಿಕಾರರು ಆಧುನಿಕ ಪ್ರಜ್ಞೆಯಿಂದ ನೋಡಿದ್ದಾರೆ. ಇವರ ಮಾಧವಿ ಪುರುಷ ಪ್ರಧಾನ ವ್ಯವಸ್ಥೆಯ ನಿರ್ಧಾರವನ್ನು ಪ್ರಶ್ನಿಸುವ, ಸ್ವಾಭಿಮಾನ ಹಾಗೂ ಸ್ವಂತ ನಿಲುವಿನ ದಿಟ್ಟ ಹೆಣ್ಣಾಗಿದ್ದಾಳೆ.

ಎಂ.ಎಸ್.ವೇದಾ ಅವರ 'ಜಯ' ಕಾದಂಬರಿ ಮಹಾಭಾರತದ ಕುರುಕ್ಷೇತ್ರವನ್ನು ವಸ್ತುವನ್ನಾಗಿಸಿಕೊಂಡಿರುವ ಕೃತಿ. ಮಹಾಭಾರತದ ಕುರುಕ್ಷೇತ್ರದ ಯುದ್ಧಕ್ಕೆ 'ಪುರುಷರಾಜಕಾರಣ'ವೇ ಪ್ರಧಾನವೆಂದು ಹೇಳುತ್ತಾ ಅಲ್ಲಿನ ಪಾತ್ರಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸುತ್ತದೆ. 'ಜಯ'ದ ಶ್ರೇಷ್ಠತೆ ಇರುವುದು ಇದರ ಯುದ್ಧ ವಿರೋಧಿ ಸ್ತ್ರೀ ಚಿಂತನೆಯಲ್ಲಿ ವ್ಯಾಸಭಾರತದಲ್ಲಿ ನಿರ್ಲಕ್ಷಿತ ಪಾತ್ರಗಳಿಗೆ ಇದು ಕೊಡುವ ಪ್ರಾಮುಖ್ಯತೆಯಲ್ಲಿ ಹೀಗೆ ಎರಡೂ ಕಾದಂಬರಿಗಳಲ್ಲಿನ ವೈಶಿಷ್ಟ್ಯತೆಗಳನ್ನು ಸ್ತ್ರೀವಾದಿ ಚಿಂತನೆಯಲ್ಲಿ ಶೋಧಿಸುವುದು ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ. ಈ ಉದ್ದೇಶವು ಎಂಟು ಅಧ್ಯಾಯಗಳನ್ನು ವ್ಯಾಪಿಸಿದೆ.

ಮೊದಲ ಅಧ್ಯಾಯದಲ್ಲಿ ಮಾಧವಿ ಮತ್ತು ಜಯ ಕಾದಂಬರಿಗಳು ಮಹಾಭಾರತವನ್ನು ವಸ್ತುವನ್ನಾಗಿಸಿಕೊಂಡಿರುವುದರಿಂದ, ಸ್ತ್ರೀವಾದಿ ನೆಲೆಯಲ್ಲಿ ನೋಡಬೇಕಾಗಿರುವುದರಿಂದ ಅಧ್ಯಯನಕ್ಕೆ ಪೂರಕವಾಗಿ ಪ್ರಾಚೀನ ಕಾಲದಿಂದ ಇಂದಿನವರೆಗಿನ ಮಹಿಳಾ ಸ್ಥಿತಿಗತಿಯ ಸಂಕ್ಷಿಪ್ತ ಪರಿಚಯವನ್ನು ಹಾಗೂ ಅಧ್ಯಯನಕ್ಕೆ ಪೂರಕವಾಗಿ ಸಂಕ್ಷಿಪ್ತವಾಗಿ ಸ್ತ್ರೀವಾದದ ಉಗಮ, ಬೆಳವಣಿಗೆಯನ್ನು ಕುರಿತು ಚರ್ಚಿಸಲಾಗಿದೆ. ಅಧ್ಯಾಯ ಎರಡರಲ್ಲಿ ವ್ಯಾಸಭಾರತ ಹಾಗೂ ಮೂಲ ಮಾಧವಿಕತೆಯನ್ನು ವಿವರಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಮಾಧವಿ ಕಾದಂಬರಿಕಾರರ ಪರಿಚಯವನ್ನು ಅಧ್ಯಾಯ ನಾಲ್ಕರಲ್ಲಿ ಮಾಧವಿ ಕಾದಂಬರಿಯ ಕಥಾ ಹಂದರ ಮತ್ತು ಮಾಧವಿ ಪಾತ್ರವನ್ನು ಚರ್ಚಿಸಲಾಗಿದೆ. ಅಧ್ಯಾಯ ಐದರಲ್ಲಿ 'ಜಯ' ಕಾದಂಬರಿಕಾರರ ಪರಿಚಯವಿದೆ. ಅಧ್ಯಾಯ ಆರರಲ್ಲಿ 'ಜಯ' ಕಾದಂಬರಿಯ ಕಥೆಯನ್ನು, ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರಗಳನ್ನು ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳರಲ್ಲಿ ಮಹಾಭಾರತದ ಕಥೆಯನ್ನು ಒಳಗೊಂಡಿರುವ ಜಯ ಮತ್ತು ಮಾಧವಿ ಕಾದಂಬರಿಗಳ ವಿಶಿಷ್ಟ, ವಿಭಿನ್ನ ಚಿಂತನೆಯನ್ನು ಸ್ತ್ರೀವಾದಿ ನೆಲೆಯಲ್ಲಿ ಶೋಧಿಸಲಾಗಿದೆ.

ಅಧ್ಯಾಯ ಎಂಟರಲ್ಲಿ ಪ್ರಬಂಧದ ಬಗ್ಗೆ ಒಟ್ಟಾರೆ ನಿಲುವನ್ನು ಮಂಡಿಸಲಾಗಿದೆ.

ಪ್ರಬಂಧದ ಕೊನೆಯಲ್ಲಿ ಅನುಬಂಧಕ್ಕೆ ಸಂಬಂಧಿಸಿದ ವಿವರಗಳನ್ನು ಕೊಡಲಾಗಿದೆ.

# ಅಧ್ಯಾಯ – ೧

## ಅ) ಪ್ರಾಚೀನ ಕಾಲದಿಂದ ಇಂದಿನವರೆಗಿನ ಮಹಿಳಾ ಸ್ಥಿತಿಗತಿಯ ಸಂಕ್ಷಿಪ್ತ ಪರಿಚಯ

ನಿಬಂಧಕ್ಕೆ ಆಯ್ಕೆಮಾಡಿಕೊಂಡಿರುವ "ಸ್ತ್ರೀವಾದಿ ದೃಷ್ಟಿಕೋನದಲ್ಲಿ ಪ್ರಾಚೀನ ಕಥಾ ವಸ್ತುವಿನ ನಿರ್ವಹಣೆ" ವಿಷಯಕ್ಕೆ ಸಂಬಂಧಿಸಿದಂತೆ ಪೂರಕವಾಗಿ ಪ್ರಾಚೀನ ಕಾಲದಿಂದ ಹಿಡಿದೂ ಇಂದಿನವರೆಗಿನ ಮಹಿಳಾ ಸ್ಥಿತಿಗತಿಯನ್ನು ಈ ಅಧ್ಯಯನದಲ್ಲಿ ಸಂಕ್ಷಿಪ್ತವಾಗಿ ಹಿಡಿದಿಡಲು ಪ್ರಯತ್ನಿಸಿದ್ದೇನೆ.

"ಹೊನ್ನು ಮಾಯೆಯೆಂಬುದು, ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯ ಕಾಣಾ ಗುಹೇಶ್ವರ"

'ಹೊನ್ನು, ಹೆಣ್ಣು, ಮಣ್ಣು, ಮಾಯೆ' ಎಂಬುದು ಹಿಂದು, ಇಂದು ಜನಜನಿತವಾಗಿರುವ ಮಾತು. ಆದರೆ ಹೊನ್ನು, ಹೆಣ್ಣು, ಮಣ್ಣು ಮಾಯೆಯಲ್ಲ ಮನದ ಮುಂದಣ ಆಸೆಯೇ ಮಾಯೆ ಎಂದು ಲೋಕಕ್ಕೆ ಸಾರಿದವರು ಅಲ್ಲಮಪ್ರಭು. 'ಅರಿತವರಿಗೆ ಮಾಯೆ ಶಕ್ತಿ', 'ಅರಿಯದವರಿಗೆ ಮಾಯೆ ಮಾರಿ' 'ಅರಿವು' ಗೈರು ಹಾಜರಾಗುವ ಸ್ಥಿತಿಯೇ 'ಮಾಯೆ', ವಿವೇಕ, ವಿವೇಚನೆಯನ್ನು ಮಂಕುಗೊಳಿಸಿ ದುರಂತಕ್ಕೆ ಕಾರಣವಾಗುವ ಮನಸ್ಸಿನ ವಿಕೃತ ಸ್ಥಿತಿಯೇ 'ಮಾಯೆ' ಎಂಬ ತಾತ್ವಿಕತೆಯನ್ನು ಕೊಟ್ಟವರು ಅಲ್ಲಮ. ಆ ಮೂಲಕಸ್ತ್ರೀತ್ವಕ್ಕಂಟಿದ 'ಮಾಯೆ' ಎಂಬ ಹುಸಿ ನಂಬಿಕೆಯನ್ನು ನಿರಾಕರಿಸಿದರು. ಸ್ತ್ರೀಪರ ಚಿಂತನೆಗೆ ನಾಂದಿ ಹಾಡಿದ್ದು ವಚನ ಸಾಹಿತ್ಯ. ಸ್ತ್ರೀಗೆ ಮೊದಲ ಬಾರಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕೊಟ್ಟ ಶ್ರೇಯಸ್ಸು ವಚನ ಸಾಹಿತ್ಯಕ್ಕೆ ಸಲ್ಲುತ್ತದೆ. ಹಾಗಾದರೆ ೧೨ನೇ ಶತಮಾನಕ್ಕಿಂತ ಹಿಂದೆ ಸ್ತ್ರೀಯರ ಸ್ಥಾನಮಾನ ಹೇಗಿದ್ದವು ನೋಡೋಣ.

ಪ್ರಾಚೀನ ಕಾಲದಲ್ಲಿ ಸ್ತ್ರೀಯರ ಸ್ಥಾನ-ಮಾನಗಳು ಹೇಗಿದ್ದವು ಎಂಬುದನ್ನು ತಿಳಿಯಲು ನಮಗಿರುವ ಆಧಾರಗಳೆಂದರೆ ವೇದಗಳು, ಪುರಾಣಗಳು, ಮನುಸ್ಮೃತಿ, ಮಹಾಕಾವ್ಯಗಳು ಮುಂತಾದವು. ಇವುಗಳಿಂದ ಒಂದು ಹಂತದಲ್ಲಿ ಹೆಣ್ಣಿನ ಸ್ಥಾನಮಾನ ಉದಾತ್ತವಾಗಿದ್ದು ಆನಂತರದಲ್ಲಿ ಇಳಿಮುಖವಾಗಿರುವುದು ಕಂಡುಬರುತ್ತದೆ.

ಶಿಲಾಯುಗದಲ್ಲಿ ಬಂಧುತ್ವ ಸಮಾಜಸ್ವರೂಪ ಇದ್ದು ಅಲ್ಲಿ ಜೀವೋತ್ಪಾದನೆ ಮುಖ್ಯವಾಗಿತ್ತು. ಬಾಹುಬಲ ಮುಖ್ಯವಾದುದರಿಂದ ಜನಸಂಖ್ಯೆಗೆ ಪ್ರಾಧಾನ್ಯತೆ ಇತ್ತು.

ಹೆಣ್ಣು ಜನಸಂಖ್ಯೆಯನ್ನು ಏರಿಸುವವಳಾದುದರಿಂದ ಅವಳಿಗೆ ಸಹಜವಾಗಿಯೇ ಪ್ರಾಮುಖ್ಯತೆ ಹೆಚ್ಚಿತು. ಬಂಧುತ್ವ ಸಮಾಜದಿಂದ ಜಾತಿ ಸಮಾಜಕ್ಕೆ ಪರಿವರ್ತನೆಯಾದ ಸಂಕ್ರಮಣ ಕಾಲದಲ್ಲಿ ಹೆಣ್ಣಿನ ಸ್ಥಾನ ಇಳಿಯಿತು ಯಾವ ಕಾಲದಲ್ಲಿ ಯಾವ ರೀತಿಯಲ್ಲಿ ಜಾತಿ ಸಮಾಜ ಹುಟ್ಟಿಕೊಂಡಿತೆಂಬುದಕ್ಕೆ ಸ್ಪಷ್ಟತೆ ಇಲ್ಲ ವರ್ಗನಿಷ್ಠ ಸಮಾಜ ಪುರುಷನಿಂದ ಹುಟ್ಟಿತೆಂದು ಪುರುಷ ಸೂಕ್ತದಲ್ಲಿ ಹೇಳಲಾಗಿದೆ. ಋಗ್ವೇದ, ಯಜುರ್ವೇದ ಮತ್ತು ಅಥರ್ವಣವೇದಗಳಲ್ಲಿ ವರ್ಣಗಳ ಹುಟ್ಟಿನ ಬಗ್ಗೆ ಭಿನ್ನವಾದ ವಿವರಗಳಿವೆ.

ಬಂಧುತ್ವ ಸಮಾಜದಿಂದ ಜಾತಿ ಸಮಾಜಕ್ಕೆ ಸ್ಥಿತ್ಯಂತರಗೊಳ್ಳುವಾಗ ಸ್ತ್ರೀಯ ಸ್ಥಾನ ಇಳಿದಂತೆ ಕಾಣುತ್ತದೆ. ಜಾತಿಗಳು ಹುಟ್ಟಿಕೊಂಡ ತಕ್ಷಣ ಪಾವಿತ್ರ್ಯ ಕಾಪಾಡುವ ಕಾರಣಕ್ಕಾಗಿ ಸ್ತ್ರೀಗೆ ಕಟ್ಟುಪಾಡು ವಿಧಿಸುವ ರೂಢಿ ಮೊದಲಾಯಿತು. ಜಾತಿಯ ಹೊರಗಿನ ದೇಹ ಸಂಬಂಧವನ್ನು ಸ್ತ್ರೀ ಇಟ್ಟುಕೊಳ್ಳಲಾರದ ಹಾಗೆ ಹಲವು ಪದ್ಧತಿಗಳನ್ನು ಅನುಷ್ಠಾನಕ್ಕೆ ತರಲಾಯಿತು.

ಅಥರ್ವಣವೇದದ ಪ್ರಕಾರ ಸ್ತ್ರೀ ಉಪನಯನಕ್ಕೆ ಅರ್ಹಳು ಬ್ರಹ್ಮಚರ್ಯೆ ಮುಗಿಸಿದ ಮೇಲೆ ವಿವಾಹ ಯೋಗ್ಯಳು ಶ್ರೌತ ಸೂತ್ರದ ಪ್ರಕಾರ ಆಕೆ ಮಂತ್ರಗಳನ್ನು ಪುನರುಚ್ಚರಿಸಬಹುದು ಹಾಗೂ ಕಲಿಸಲೂಬಹುದಾಗಿತ್ತು. ವೇದದ ಬೇರೆ ಬೇರೆ ಶಾಖೆಗಳನ್ನು ಅಭ್ಯಸಿಸಿ ಮೀಮಾಂಸೆಯಲ್ಲಿ ನಿಪುಣಳಾಗಿ ಗುರುಕುಲದಲ್ಲಿ ವಿದ್ಯಾಭ್ಯಾಸ ನಡೆಸುತ್ತಿದ್ದಳೆನ್ನುವುದಕ್ಕೆ ಪಾಣಿನಿಯ ಅಷ್ಟಾಧ್ಯಾಯದಲ್ಲಿ ಸಾಕ್ಷಿಗಳಿವೆ. ಪತಂಜಲಿಯ ಮಹಾಭಾಷ್ಯದಲ್ಲೂ ಇಂಥ ವಿವರಗಳಿವೆ. ಧರ್ಮ, ಅಧ್ಯಾತ್ಮ, ತತ್ವ್ತಜ್ಞಾನಗಳ ಕುರಿತಾಗಿ ಸಾರ್ವಜನಿಕವಾಗಿ ಪುರುಷರಿಗೆ ಸರಿಸಮವಾಗಿ ಚರ್ಚಿಸಿದ ಜನಕ, ಸುಲಭಾ, ಯಜ್ಞವಲ್ಕ್ಯ, ಮೈತ್ರೇಯಿ, ಗಾರ್ಗಿಯರ ಕತೆಗಳಿವೆ. ಆದರೆ ಮನುಸ್ಮೃತಿ 'ಸ್ತ್ರೀ' 'ಎಲ್ಲಿ ಪೂಜಿಸಲ್ಪಡುವಳೋ ಅಲ್ಲಿ ದೇವತೆಗಳು ವಾಸಿಸುತ್ತಾರೆ' ಎಂದು ಹೇಳಿದ ಬೆನ್ನಹಿಂದೆಯೇ 'ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ' ಎಂದು ಸಾರಿಬಿಟ್ಟ ಮಾತ್ರವಲ್ಲ ಸ್ತ್ರೀಯರ ಮತ್ತು ಶೂದ್ರರ ವಿರುದ್ಧ ಕೆಂಡಕಾರಿದ. ಇಲ್ಲಿ ಸ್ತ್ರೀಯನ್ನು ಭೋಗವಸ್ತುವೆಂದೇ ಪರಿಗಣಿಸಲಾಯಿತು.

ಜೈನ ಹಾಗೂ ಬೌದ್ಧ ಧರ್ಮಗಳ ಕಾಲದಲ್ಲಿ ಅವಳು ತನ್ನ ದೀನ ಸ್ಥಿತಿಯಿಂದ ಸ್ವಲ್ಪ ಚೇತರಿಸಿಕೊಂಡಳು. ಲೌಕಿಕ- ಪಾರಲೌಕಿಕ ಸಮಸ್ಯೆಗಳನ್ನು ಹಗುರಗೊಳಿಸಿ ಸ್ತ್ರೀ ವಿರೋಧಿಯಾಗಿದ್ದ ಸಾಮಾಜಿಕ ವಾಸ್ತವತೆಯಲ್ಲಿ ಜೀವಪರತೆಯನ್ನು ಮೂಡಿಸಿದವು ಸಂಘಮಿತ್ರ, ಕ್ಷೇಮಾ, ಮಹಾಪ್ರಜಾಪತಿ, ಕಂತಿ, ಯೋಗಿನಿ ಮೊದಲಾದವರು ಬೌದ್ಧ ಹಾಗೂ ಜೈನಧರ್ಮಗಳ ಪ್ರಚಾರಕಿಯರಾಗಿ ಗುರುತರ ಹೊಣೆಯನ್ನು ನಿರ್ವಹಿಸಿದರು.

ಕಾಲಾಂತರದಲ್ಲಿ ಭಾರತವು ಎದುರಿಸಿದ ಪರಕೀಯ ಆಕ್ರಮಣಗಳು ರಾಜಕೀಯ, ಧಾರ್ಮಿಕ ಸ್ಥಿತ್ಯಂತರಗಳು ಮತ್ತು ಮತಧರ್ಮಗಳ ಪೈಪೋಟಿಯಲ್ಲಿ ಮಹಿಳೆಯ ಬದುಕು ಹೊಸ ಹೊಸ ನಿರ್ಬಂಧಗಳಿಗೆ ಗುರಿಯಾಯಿತು ರಕ್ಷಣೆಯ ನೆಪದಲ್ಲಿ ದಾಸ್ಯದ ಸಂಕೋಲೆಯಲ್ಲಿ ಬಿಗಿಯಾಗಿ ಕೌಟುಂಬಿಕ ಮೌಲ್ಯಾದರ್ಶಗಳ ಹೊರೆ, ನೀತಿ–ನಿಯಮಗಳ ಭಾರ ಹಿರಿದಾಗಿ ಪುರುಷಾಧೀನತೆಯೇ ಶ್ರೇಷ್ಠ ಮೌಲ್ಯವಾಗಿ ಪರಿಣಮಿಸಿತು. ಈ ಹಿಂದಿನ ಉದಾರವಾದಿ ಧಾರ್ಮಿಕ ಮೌಲ್ಯಗಳು ಮರೆಯಾಗಿ ಸ್ತ್ರೀಯರ ಧಾರ್ಮಿಕ, ಸಾಮಾಜಿಕ ಸಹಭಾಗಿತ್ವ ನಿಷೇಧಕ್ಕೊಳಗಾಗಿ ಸೂತ್ರಗಳ ಧರ್ಮ ಮತ್ತು ಸ್ಮೃತಿಕಾರರ ಬಿಗಿ ನೀತಿಯಿಂದಾಗಿ ಸ್ತ್ರೀಚೈತನ್ಯವು ವಿನಾಶದ ಅಂಚನ್ನು ತಲುಪಿತು.

ಪುರುಷ ಸಮಾಜ ಸೃಷ್ಟಿಸಿದ ವ್ಯೂಹದಲ್ಲಿ ಅಸ್ಪೃಶ್ಯಳಾಗಿ, ಭೋಗವಸ್ತುವಾಗಿ ಕೇವಲ ಸಂತಾನೋತ್ಪತ್ತಿಯ ಸಾಧನವಾದಳು. ಹೆಣ್ಣು ಮಾಯೆ ರಾಕ್ಷಸಿ, ದುಃಖಾದಾಯಿನಿ ಎಂದು ಪರಿಗಣಿಸಲ್ಪಟ್ಟು ಅತಂತ್ರ ಸ್ಥಿತಿಯನ್ನು ತಲುಪಿದಳು ಸ್ತ್ರೀಗೆ ವಿವಾಹವೇ ಮೋಕ್ಷಮಾರ್ಗವಾಗಿ,ಪತಿಯೇ ಪರದೈವವಾಗಿ ಸ್ತ್ರೀ ವ್ಯಕ್ತಿತ್ವದ ಉಳಿದೆಲ್ಲ ಸಾಧ್ಯತೆಗಳು ನಿಷೇಧಗೊಂಡು ನಾಲ್ಕು ಗೋಡೆಗಳ ಮಧ್ಯೆ ಬಂಧಿತಳಾದ ವಿಷಮ ಸ್ಥಿತಿಯಲ್ಲಿ ಹೆಣ್ಣಿನ ಆರ್ತನಾದಕ್ಕೆ ದನಿಯಾದದ್ದು ವಚನ ಚಳವಳಿ.

ವಚನ ಚಳವಳಿಯು ಸಮಾನತೆಯ ಕ್ರಾಂತಿಯನ್ನು ಹುಟ್ಟು ಹಾಕಿ ಸ್ತ್ರೀ – ಪುರುಷರ ಸಮಾನತೆಯನ್ನು ಎತ್ತಿಹಿಡಿಯಿತು. ಪುರುಷಾಧಿಕಾರವನ್ನು ಪ್ರಶ್ನಿಸುವ, ನಿರಾಕರಿಸುವ ಹಕ್ಕು ಹೊಂದಿದಳು. ಅಕ್ಕಮಹಾದೇವಿ ಆದಿಯಾಗಿ ಅನೇಕ ಸ್ತ್ರೀಯರು ತಮ್ಮನೋವು– ನಲಿವುಗಳನ್ನು ಅಕ್ಷರವಾಗಿಸತೊಡಗಿದರು.

ಅನೇಕ ಏಳು–ಬೀಳುಗಳ ನಡುವೆ ತೆವಳುತ್ತಾ ತನ್ನ ಸ್ವಂತ ಅಸ್ತಿತ್ವಕ್ಕಾಗಿ ಹುಡುಕಾಡುತ್ತಿದ್ದ ಮಹಿಳೆಗೆ ಬ್ರಿಟಿಷರ ಆಗಮನ ಒಂದು ಹೊಸ ತಿರುವು ನೀಡಿತು. ಬ್ರಿಟಿಷರ ಆಗಮನದಿಂದಾಗಿ ಶಿಕ್ಷಣ, ಸಾಹಿತ್ಯ, ಕೈಗಾರಿಕೆ ಹೀಗೆ ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅನೇಕ ಬದಲಾವಣೆಗಳಾದವು. ಪಾಶ್ಚಾತ್ಯ ಸಂಪರ್ಕ, ಸಾಮಾಜಿಕ ಚಿಂತನೆಯ ಪರಿಣಾಮ. ಸಮಾಜ ಹೊಸರೂಪವನ್ನು ಪಡೆಯಲಾರಂಭಿಸಿತು. ಇದರ ಜೊತೆಗೆ ಸಮಾಜ ಸುಧಾರಕರು ಹಾಗೂ ಸಾಮಾಜಿಕ ಚಿಂತಕರು ಹುಟ್ಟಿಕೊಂಡರು. ಬ್ರಿಟಿಷರ ಕಪಿಮುಷ್ಠಿಯಲ್ಲಿ ಭಾರತೀಯರಿದ್ದ ಹಾಗೇ ಪುರುಷನ ಗೃಹಬಂಧನದಲ್ಲಿ ಹೆಣ್ಣು ದಾಸ್ಯದಲ್ಲಿರುವುದನ್ನು ಗುರುತಿಸಿ ಸ್ತ್ರೀ ಶಿಕ್ಷಣದ ಅಗತ್ಯತೆಯನ್ನು ಸಾರಿದರು. ಅವರಲ್ಲಿ ಪ್ರಮುಖರಾದವರೆಂದರೆ ರಾಜಾರಾಮ್‌ಮೋಹನ್‌ರಾಯ್, ಮಹರ್ಷಿಕರ್ವೆ.

ಮಹರ್ಷಿಕರ್ವೆ ಅವರು ತಮ್ಮ 'ಸ್ತ್ರೀ' 'ಶಿಕ್ಷಣದ ಉದ್ದೇಶ' ಎಂಬ ಲೇಖನದಲ್ಲಿ ಹೆಣ್ಣಿಗೆ ಶಿಕ್ಷಣ ಅತಿ ಅವಶ್ಯಕ ಎಂಬ ವಿಚಾರವನ್ನು ಪ್ರತಿಪಾದಿಸಿದರು. ಇದೇ ಸಂದರ್ಭದಲ್ಲಿ ಬ್ರಾಹ್ಮಣ ಮಹಿಳೆಯರಿಗೆ ಸಂಪ್ರದಾಯ ಆಚಾರ–ವಿಚಾರ,

ಧಾರ್ಮಿಕ ನಂಬಕೆಗಳ ಹಿನ್ನೆಲೆಯಲ್ಲಿ ಹಾಕಿರುವ ನಿರ್ಬಂಧಗಳು, ಕಟ್ಟುಪಾಡುಗಳು, ಅದೆಷ್ಟು ಅಮಾನವೀಯವಾಗಿದೆ ಎಂಬುದನ್ನು ಹೇಳುತ್ತಲೇ ಇಂತಹ ಸ್ತ್ರೀಯರಿಗಿರುವ ಒಂದೇ ವಿಮೋಚನೆಯ ಮಾರ್ಗ ಎಂದರೆ 'ಸ್ತ್ರೀಶಿಕ್ಷಣ' 'ಸ್ತ್ರೀವಿದ್ಯಾಭ್ಯಾಸ' ಎಂದರು. ಸ್ತ್ರೀ ಹೀಗೆ ಶಿಕ್ಷಣವು ಬಾಲವಿಧವೆಯರಿಗೆ ವಿಧವಾ ಸಮಸ್ಯೆಗೆ, ಬಾಲ್ಯ ವಿವಾಹಕ್ಕೆ, ಮರುಮದುವೆಯ ಚಿಂತನೆಗೆ ಸಹಕಾರಿಯಾಯಿತು. ಸ್ತ್ರೀಯ ಬದುಕಿನಲ್ಲಿ ಶಿಕ್ಷಣ ಮೊದಲಾಯಿತು. ಅವಳಲ್ಲಿನ ಆಲೋಚನಾ ಶಕ್ತಿಗೆ ಹೊಸ ತಿರುವು ನೀಡಿತು. ಇದರಿಂದಾಗಿ ತಮ್ಮ ಸಮಸ್ಯೆಗಳನ್ನು ತಾವೇ ವಿವರಿಸಿಕೊಳ್ಳಲು, ಪರಿಹರಿಸಿಕೊಳ್ಳಲು ಮುಂದಾದರು. ಇದರ ಫಲವಾಗಿ ಹಲವಾರು ಮಹಿಳಾ ಸಾಹಿತಿಗಳು ಜನ್ಮತಾಳಿದರು. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ತಮ್ಮ ಸಂವೇದನೆಯನ್ನು ಹೊರಹಾಕುವ ಮೂಲಕ ಸಮಾಜಕ್ಕೆ ತಮ್ಮ ಸಂವೇದನೆಯನ್ನು ಅರ್ಥೈಸತೊಡಗಿದರು.

ಪುರುಷನ ಕಾಮಾಸಕ್ತಿಯನ್ನು ಪೂರೈಸುವ ವಸ್ತುವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ ನಾಲ್ಕು ಗೋಡೆಗಳ ಮಧ್ಯೆ ಬಂಧಿಯಾಗಿದ್ದ ಮಹಿಳೆ ಶಿಕ್ಷಣದಿಂದಾಗಿ ಇಂದು ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ತನ್ನ ಛಾಪನ್ನು ಮೂಡಿಸುತ್ತಿದ್ದಾಳೆ. ಆದರೆ ಶೋಷಣೆಯಿಂದ ಮಾತ್ರ ಮುಕ್ತಳಾಗಿಲ್ಲ. ಪ್ರಾಚೀನಕಾಲದಲ್ಲಿ ನಾಲ್ಕು ಗೋಡೆಗಳ ನಡುವೆ ಶೋಷಣೆಗೊಳಗಾಗುತ್ತಿದ್ದ ಮಹಿಳೆ ಇಂದು ಮನೆಯ ಒಳಗು–ಹೊರಗೂ ಅಪಮಾನಕ್ಕೊಳಗಾಗುತ್ತಿದ್ದಾಳೆ. ಜಾಹಿರಾತು, ಸಿನಿಮಾ ಮಾಧ್ಯಮಗಳಲ್ಲಿ ಹೆಣ್ಣನ್ನು ಅಶ್ಲೀಲವಾಗಿ, ಅನಾವಶ್ಯಕವಾಗಿ ಬಳಸಿಕೊಳ್ಳಲಾಗುತ್ತಿದೆ. ವಿಶ್ವಸುಂದರಿಯಂಥ ಸ್ಪರ್ಧೆಗಳಲ್ಲಿ ಹೆಣ್ಣಿನ ದೇಹವನ್ನು ಮನರಂಜನೆಯನ್ನಾಗಿಸಿಕೊಳ್ಳಲಾಗುತ್ತಿದೆ. ಹೊರಗೆ ಕಛೇರಿಗಳಲ್ಲಿ ದುಡಿಯುವ ಮಹಿಳೆ ದಿನನಿತ್ಯ ಒಂದಲ್ಲ ಒಂದು ರೀತಿಯಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿದ್ದಾಳೆ. ವರದಕ್ಷಿಣೆಗೆ ಜೀವಂತ ಬಲಿಯಾಗುತ್ತಿದ್ದಾಳೆ. ಶಾಲಾ ಕಾಲೇಜುಗಳಲ್ಲಿ ಪುರುಷ ಶಿಕ್ಷಕರುಗಳಿಂದ ಹೆಣ್ಣುಮಕ್ಕಳು ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿದ್ದಾರೆ. ಅಷ್ಟೇ ಏಕೆ? ಸಂಜೆ ಏಳರ ನಂತರ ಹೆಣ್ಣು ಒಬ್ಬಂಟಿಯಾಗಿ ಹೊರಗಿರಲು ಸಾಧ್ಯವೇ ಆಗದ ಅತಂತ್ರ ಸ್ಥಿತಿಯಲ್ಲಿಯಲ್ಲಿದ್ದಾಳೆ. ಹೀಗೆ ಅಂದಿನಿಂದ ಇಂದಿನವರೆಗೂ ಒಂದಲ್ಲ ಒಂದು ವಿಧದಲ್ಲಿ ಪುರುಷ ದೌರ್ಜನ್ಯಕ್ಕೆ ಮಹಿಳೆ ಒಳಗಾಗುತ್ತಾ ಬಂದಿದ್ದಾಳೆ.

## ಆ) ಸ್ತ್ರೀವಾದದ ಇತಿಹಾಸ

ಯಾವುದೇ ಒಂದು ವಿಷಯವನ್ನು ಅಧ್ಯಯನ ಮಾಡುವಾಗ ಅದರ ಇತಿಹಾಸವನ್ನು ತಿಳಿಯುವುದು ಅತ್ಯಾವಶ್ಯಕ ಪ್ರಸ್ತುತ ಪ್ರಬಂಧವನ್ನು ಸ್ತ್ರೀವಾದದ ಹಿನ್ನೆಲೆಯಿಂದ ಪರಿಶೀಲಿಸಬೇಕಾಗಿರುವುದರಿಂದ ಅದಕ್ಕೆ ಪೂರಕವಾದ ಸ್ತ್ರೀವಾದದ ಉಗಮ, ಬೆಳವಣಿಗೆ ಹಾಗೂ ಇನ್ನಿತರ ವಿಚಾರಗಳನ್ನು ಕುರಿತು ಚರ್ಚಿಸುವುದು ಅನಿವಾರ್ಯ.

ಇಂದು ಸ್ತ್ರೀವಾದ ಪ್ರಪಂಚಾದ್ಯಂತ ಹರಡಿಕೊಂಡಿರುವ ಒಂದು ಸಾಮಾಜಿಕ ಚಳವಳಿಯಾಗಿದೆ. ಇದು, ಪ್ರಪಂಚದಲ್ಲಿರುವ ಎಲ್ಲಾ ಸ್ತ್ರೀಯರ ಅಭಿವೃದ್ಧಿಯನ್ನು ಸಮಾನತೆಯನ್ನು ಎತ್ತಿಹಿಡಿಯಲು ಅನುಕೂಲಕರವಾಗಿರುವ ಒಂದು ತಾತ್ವಿಕ ವಿಚಾರಧಾರೆಯಾಗಿದೆ.

ಇಂಗ್ಲಿಷಿನ Feminism ಎಂಬ ಪದಕ್ಕೆ ಸಂವಾದಿಯಾಗಿ 'ಸ್ತ್ರೀವಾದ' ಪದಬಳಕೆಯಾಗಿದೆ. ಇದು Femina ಎಂಬ ಲ್ಯಾಟಿನ್‌ಪದದಿಂದ ಬಂದಿದೆ. 'Femina' ಎಂಬ ಪದಕ್ಕೆ 'ಸ್ತ್ರೀಯ ಗುಣಾತಿಶಯಗಳನ್ನು ಹೊಂದಿರುವ (having qualities of Female) ಎಂದರ್ಥ ಮೊದಲು ಸ್ತ್ರೀಯರ ಲಿಂಗ ಗುಣಾತಿಶಯಗಳನ್ನು ಸೂಚಿಸಲು ಮಾತ್ರ ಬಳಕೆಯಾಯಿತು. ಆನಂತರ ಸ್ತ್ರೀಯರ ಹಕ್ಕುಬಾಧ್ಯತೆಗಳ ಬಗ್ಗೆ ಚರ್ಚಿಸುವುದಕ್ಕಾಗಿ ಬಳಸಲಾಯಿತು.

೧೮೮೯ರಲ್ಲಿ 'Womanism' ಎಂಬ ಪದ ಬಳಕೆಗೆ ಬಂತು. ೧೮೯೦ರಲ್ಲಿ 'Womanism' ಎಂಬ ಪದಕ್ಕೆ ಬದಲಾಗಿ 'Feminism' ಎಂಬ ಪದ ಬಳಕೆಗೆ ಬಂತು. ೧೮೯೪ರಲ್ಲಿ ಪ್ರಕಟಗೊಂಡ ಆಕ್ಸ್‌ಫರ್ಡ್ ಇಂಗ್ಲಿಷ್ ನಿಘಂಟುವಿನಲ್ಲಿ ಮೊತ್ತಮೊದಲು ಈ ಪದ ಕಾಣಿಸಿಕೊಂಡಿತು. ಈ ಪದಕ್ಕೆ ತನ್ನ ಜೀವನದ ಮೂಲಕ ಅರ್ಥವನ್ನು ಹುಡುಕಿಕೊಟ್ಟವರು ರೇ ಸ್ಟ್ರೇಚೆ (Ray Strachey) ಎಂಬುವರು.

ಸ್ತ್ರೀವಾದ ಎಂದರೇನು? ಎಂಬ ಪ್ರಶ್ನೆಗೆ ಸ್ತ್ರಿವಾದಿ ಚಿಂತಕರು, ವಿದ್ವಾಂಸರು ಈ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ.

"ಕುಟುಂಬದ ಒಳಗಾಗಲಿ, ಹೊರಗಾಗಲಿ ಸಮಾಜ ಸ್ತ್ರೀಯ ಮೇಲೆ ನಡೆಸುವ ದಬ್ಬಾಳಿಕೆ ಹಾಗೂ ಶೋಷಣೆಯ ಸ್ವರೂಪವನ್ನು ಅರ್ಥಮಾಡಿಕೊಂಡು, ಅಂತಹ

ಪರಿಸ್ಥಿತಿಯ ನಿವಾರಣೆಗಾಗಿ ಪ್ರಜ್ಞಾಪೂರ್ವಕವಾಗಿ ನಡೆಸುವ ಚಿಂತನೆ ಹಾಗೂ ಚಟುವಟಿಕೆಗಳು"[೧] – ಶ್ರೀಮತಿ.

ವಿಜಯಾದಬ್ಬೆ ಅವರ ಪ್ರಕಾರ "ಸ್ತ್ರೀವಾದವೆಂಬುದು ಬದುಕಿನ ಒಂದು ಜೀವನಕ್ರಮವೂ ಆಗಿದೆ. ಆದ್ದರಿಂದ ಸ್ತ್ರೀವಾದ ನಮ್ಮ ಬದುಕಿನಲ್ಲಿ ಹೆಜ್ಜೆಹೆಜ್ಜೆಗೂ ನಮ್ಮೊಡನೆ ಬರುವಂಥದು. ಎಲ್ಲೋ ದೂರದಲ್ಲಿ ಯಾರೋ ತೆಗೆದುಕೊಳ್ಳುವ ನಿರ್ಣಯವಲ್ಲ. ಈಗಾಗಲೇ ಇಲ್ಲಿಂದಲೇ ನಾವೆಲ್ಲರೂ ಆಚರಿಸಬಹುದಾದ್ದು ಮತ್ತು ಆಚರಿಸಬೇಕಾದ್ದು".[೨]

ಗಾಯಿತ್ರಿ ಅವರ ಪ್ರಕಾರ "ಸ್ತ್ರೀವಾದವೆನ್ನುವುದು ಬೌದ್ಧಿಕ ಕಸರತ್ತು ಏನಲ್ಲ. ಸ್ವಾಭಿಮಾನಿಯಾದ ಹೆಣ್ಣೊಬ್ಬಳು ತನ್ನ ಘನತೆ, ಗೌರವದ ಬಗ್ಗೆ ಜಾಗೃತಳಾಗಿ ತನ್ನ ಸುತ್ತಣ ಪರಿಸರದಿಂದಲೂ ಅಂತಹುದೇ ಪ್ರತಿಕ್ರಿಯೆಯನ್ನು ಬಯಸುವಂತಹುದಾಗಿದೆ. ಪ್ರಜ್ಞಾವಂತ ಪುರುಷರು ಸ್ತ್ರೀಯರಿಗೆ ತಕ್ಕ ಘನತೆ, ಗೌರವಗಳಿಂದ ಅವರನ್ನು ಕಾಣುವುದು ಕೂಡ ಸ್ತ್ರೀವಾದವಾಗುತ್ತದೆ".[೩]

ಈ ಮೇಲಿನ ವಿವರಗಳಿಂದ ತಿಳಿದುಬರುವ ಅಂಶವೆಂದರೆ ಲಿಂಗ ತಾರತಮ್ಯ ಇಲ್ಲದೆ ಮಾನವೀಯತೆಯಿಂದ ಜೀವಿಸಲು ಸಮಾನತೆಯನ್ನು ಕೋರುವಂಥದು ಸ್ತ್ರೀವಾದ. ಲಿಂಗಾಧಾರಿತ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಆಗುತ್ತಿರುವ ಅನ್ಯಾಯಗಳನ್ನು ಹೋಗಲಾಡಿಸಿ ಮುಕ್ತ ವಾತಾವರಣವನ್ನು ಸೃಷ್ಟಿ ಮಾಡಿಕೊಡುವುದು. ಸಾಮಾಜಿಕ ದುಷ್ಟಶಕ್ತಿಗಳಿಂದ ಮಹಿಳೆಯನ್ನು ವಿಮೋಚನೆಗೊಳಿಸುವುದು ಸ್ತ್ರೀವಾದ ಎನಿಸಿಕೊಳ್ಳುತ್ತದೆ.

**ಸ್ತ್ರೀವಾದದ ಬಗೆಗಳು**

ಸ್ತ್ರೀವಾದ ಎಂಬುದು ಒಂದೇ ತಾತ್ವಿಕತೆಯುಳ್ಳ ಚಳವಳಿಯಲ್ಲ. ಇದರಲ್ಲಿ ತೊಡಗಿರುವ ಮಹಿಳೆಯರ ಜೀವನದ ಸ್ಥಿತಿಗತಿಗಳಿಗೆ, ಅನುಗಣವಾಗಿ ಸ್ತ್ರೀವಾದದ ಬಗೆಗಳನ್ನು ಐದು ವಿಧವಾಗಿ ವಿಂಗಡಿಸಬಹುದು.

ಉದಾರವಾದಿ ಸ್ತ್ರೀವಾದ (Liberal Feminism)

ತೀವ್ರಗಾಮಿ ಸ್ತ್ರೀವಾದ (Radical Feminism)

ಮಾರ್ಕ್ಸ್‌ವಾದಿ ಸ್ತ್ರೀವಾದ (Marxist Feminism)

ಸಮಾಜವಾದಿ ಸ್ತ್ರೀವಾದ (Socialist Feminism)

---

೧. ಸ್ತ್ರೀವಾದಿ ಹಿನ್ನೆಲೆಯಿಂದ ಕನ್ನಡ ಮತ್ತು ತಮಿಳು ಮಹಿಳಾ ಸಾಹಿತ್ಯದ ಅಧ್ಯಯನ : ಪಿಎಚ್.ಡಿ., ಮಹಾಪ್ರಬಂಧ; ಪ್ರಬಂಧಕಾರರು ಎಂ.ರಂಗಸ್ವಾಮಿ, ಪು. ಸಂಖ್ಯೆ: ೧೪.

೨. ಅದೇ, ಪು. ಸಂಖ್ಯೆ: ೧೪.

೩. ಅದೇ, ಪು. ಸಂಖ್ಯೆ: ೧೪.

ಭಾರತೀಯ ಸ್ತ್ರೀವಾದ (Indian Feminism)

ಮೇಲಿನವುಗಳಲ್ಲಿ ಉದಾರವಾದಿ ಸ್ತ್ರೀವಾದ, ತೀವ್ರಗಾಮಿ ಸ್ತ್ರೀವಾದ, ಮಾರ್ಕ್ಸ್‌ವಾದಿ ಸ್ತ್ರೀವಾದ, ಸಮಾಜವಾದಿ ಸ್ತ್ರೀವಾದ ಎಂಬವುಗಳನ್ನು ಮೂಲಭೂತ ಬಗೆಗಳಾಗಿ ಹೆಸರಿಸಿಕೊಂಡು, ಭಾರತೀಯ ಸಂಸ್ಕೃತಿಯ ಪರಿಸರದ ಸಂದರ್ಭಗಳಿಗೆ ತಕ್ಕಂತೆ ಬೆಳೆದ ಸ್ತ್ರೀವಾದದ ತಾತ್ವಿಕತೆಯನ್ನು ಭಾರತೀಯ ಸ್ತ್ರೀವಾದ ಎಂದು ಹೆಸರಿಸಬಹುದಾಗಿದೆ.

**ಉದಾರವಾದಿ ಸ್ತ್ರೀವಾದ (Liberal Feminism)**

ಉದಾರವಾದಿ ಸ್ತ್ರೀವಾದವು ಸ್ತ್ರೀಗೂ ಪುರುಷರ ಹಾಗೆ ಎಲ್ಲ ನೆಲೆಗಳಲ್ಲೂ ಸಮಾಜದಲ್ಲಿ ಸಮಾನತೆ ಬೇಕು ಎಂಬ ಅಭಿಪ್ರಾಯವನ್ನು ಮುಂದಿಟ್ಟು ಹೋರಾಡಿತು. ಮಹಿಳಾ ವಿಮೋಚನೆ, ಮಹಿಳಾ ಸ್ವಾತಂತ್ರ್ಯ, ಹೊಂದಾಣಿಕೆಯ ಸಮಾನತೆ ಎಂಬವುಗಳನ್ನು ಇದು ಒತ್ತಾಯಿಸಿತು. ಗಂಡು ಹೆಣ್ಣಿನ ನಡುವಿನ ಸಮಾನತೆಯುಳ್ಳ ಕುಟುಂಬ ರಚನೆಯನ್ನು ಉದಾರವಾದಿ ಸ್ತ್ರೀವಾದ ಸ್ವಾಗತಿಸಿತು. ಆದರೆ ಕುಟುಂಬ ರಚನೆಯಲ್ಲ ಹೆಣ್ಣು ದಾಸಿಯಾಗಿರದೆ ಸಮಾನವಾದ ಅಂತಸ್ತನ್ನು ಪಡೆಯಲು ಕರೆಕೊಟ್ಟಿತು. ಸ್ವ-ಆಲೋಚನೆ, ಸ್ವ-ನಿರ್ಣಯ, ಆಯ್ಕೆಗಳಲ್ಲಿ ತನ್ನತನವನ್ನು ಪಡೆದು ಪರಸ್ಪರ ಗೌರವದಿಂದ ಪ್ರತ್ಯೇಕತ್ವವನ್ನು ಮಹಿಳೆ ಪಡೆಯಲು ಉದಾರವಾದಿ ಸ್ತ್ರೀವಾದವು ಬಲತ್ಕರಿಸಿತು. ಇದು, ಸಮಾಜ ಮಹಿಳೆಯರ ಮೇಲೆ ಹೇರಿದ ಕೆಲವು ಪದ್ಧತಿಗಳನ್ನು ಬದಲಾಯಿಸಿತು. ಉದಾರವಾದಿ ಸ್ತ್ರೀವಾದಿ ಮುಖ್ಯವಾಗಿ ಮಹಿಳಾ ಸಮಾನತೆಗಾಗಿ ಹೋರಾಡಿತು. "ಹದಿನಾರು ಮತ್ತು ಹದಿನೇಳನೆಯ ಶತಮಾನದಲ್ಲಿ ಅರಳಿದ ಉದಾರವಾದದೊಂದಿಗೆ ಉದಾರವಾದಿ ಸ್ತ್ರೀವಾದದ ಉಗಮವಾಯಿತು" ಯುರೋಪಿನ ಮೇರಿ ವೊಲ್‌ಸ್ಟನ್ ಕ್ರಾಫ್ಟ್, ಎಲಿಜಬೆತ್ ಲೇಡಿ ಸ್ಟಾಂಟನ್, ಹ್ಯಾರಿಯಟ್ ಟೇಲರ್ ಮಿಲ್, ಬೆಟ್ಟಿ ಫ್ರೇಡನ್ ಮತ್ತು ಜಾನ್ ಸ್ಟುವರ್ಟ್‌ಮಿಲ್ ಮುಂತಾದವರು ಉದಾರವಾದಿ ಸ್ತ್ರೀವಾದದ ಚಿಂತಕರು.

**ತೀವ್ರಗಾಮಿ ಸ್ತ್ರೀವಾದ (Radical Feminism)**

ಇದನ್ನು ನವೀನ ಸ್ತ್ರೀವಾದ ಎಂದೂ ಕರೆಯುತ್ತಾರೆ. ಇದು ಎಪ್ಪತ್ತರ ದಶಕದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಉಗಮಗೊಂಡ ಕ್ರಾಂತಿಕಾರಕ ಚಳವಳಿಯಾಗಿದೆ. ಇದರ ಪ್ರತಿಪಾದಕರೆಂದರೆ ಎಡ್ರಿಯನ್.ರಿಚ., ಜೆಫನರ್ ಅಲೆನ್, ಕೇಟ್ ಮಿಲೆಟ್ ಮುಂತಾದವರು.

ಸ್ತ್ರೀ-ಪುರುಷ ಅಸಮಾನತೆಗೆ ಮೂಲವಾದ ಜೈವಿಕ ಭಿನ್ನತೆಯ ತತ್ತ್ವವನ್ನು ತೀವ್ರಗಾಮಿ ಸ್ತ್ರೀವಾದಿಗಳು ನಿರಾಕರಿಸುತ್ತಾರೆ. ಸ್ತ್ರೀಯರ ದೇಹ ರಚನೆಯನ್ನೇ ಪ್ರಧಾನವಾಗಿಟ್ಟುಕೊಂಡು ಪುರುಷರು ಸ್ತ್ರೀಯರ ಮೇಲೆ ದಬ್ಬಾಳಿಕೆ ಮಾಡುತ್ತಾರೆ ಎಂಬ

ವಾದ ಇವರದು. ಲಿಂಗಭೇದ ದಬ್ಬಾಳಿಕೆಯ ಪದ್ಧತಿಯನ್ನು ವಿರೋಧಿಸಿ ತೀವ್ರಗಾಮಿ ಸ್ತ್ರೀವಾದಿಗಳು ದನಿಯೆತ್ತಿದರು. ಗರ್ಭಧರಿಸುವಿಕೆ, ಮಕ್ಕಳನ್ನು ಹೆರುವಿಕೆ ಮುಂತಾದ ದೇಹಕ್ಕೆ ಸಂಬಂಧಪಟ್ಟ ಕಾರಣಗಳೇ ಮಹಿಳಾ ದಾಸ್ಯಕ್ಕೆ ಮೂಲಭೂತ ಕಾರಣಗಳು ಎಂದು ನಂಬಿದರು. ಇವುಗಳಿಗೆ ಮೂಲವಾದ ಮದುವೆ ಕುಟುಂಬ ಎಂಬ ಸಾಮಾಜಿಕ ಬಂಧನಗಳನ್ನು, ಪಿತೃಪ್ರಧಾನ ಸಾಮಾಜಿಕ ರಚನೆಗಳನ್ನು ತಿರಸ್ಕರಿಸಿದರು. ಲೈಂಗಿಕ ಹಕ್ಕು, ಮುಕ್ತವಾದ ಲೈಂಗಿಕ ಸಂಬಂಧ ಸಲಿಂಗ ರತಿ ಮುಂತಾದವುಗಳನ್ನು ಸ್ವಾಗತಿಸಿದರು. ಜೈವಿಕ ತಾಯ್ತನವನ್ನು ನಿರಾಕರಿಸಿದರು. ತಂತ್ರಜ್ಞಾನದ ನೆರವಿನಿಂದ ಕೃತವಾಗಿ ಗರ್ಭಧರಿಸುವಿಕೆ ಮುಂತಾದ ವಿಜ್ಞಾನದ ಬದಲಾವಣೆಯನ್ನು ಸ್ವಾಗತಿಸಿದರು. ತೀವ್ರಗಾಮಿ ಸ್ತ್ರೀವಾದಿಗಳ ಚಟುವಟಿಕೆಗಳು ಪಾಶ್ಚಿಮಾತ್ಯ ದೇಶಗಳಲ್ಲಿ ಬಹಳ ತೀವ್ರವಾಗಿ ಕಂಡುಬಂದವು. ಇದರಿಂದ ಅಲ್ಲಿನ ಸ್ತ್ರೀಯರಿಗೆ ಕ್ರಾಂತಿಕಾರಿ ಮನೋಭಾವ ಬೆಳೆಯಿತು. ಸ್ತ್ರೀ ತನ್ನನ್ನು ಸುತ್ತುವರೆದಿರುವ ಹುಸಿ ಕಲ್ಪನೆಗಳನ್ನು ಕಿತ್ತೊಗೆಯಬೇಕು. ಪ್ರತಿಯೋರ್ವ ಸ್ತ್ರೀಗೂ ಲೈಂಗಿಕ ಸ್ವಾತಂತ್ರ್ಯವಿರಬೇಕು ಎಂಬುದು ಇವರ ಮನೋಭಾವವಾಗಿತ್ತು.

**ಮಾರ್ಕ್ಸ್‌ವಾದಿ ಸ್ತ್ರೀವಾದ (Marxist Feminism)**

ಮಾರ್ಕ್ಸ್‌ವಾದಿ ಸ್ತ್ರೀವಾದದ ಪ್ರತಿಪಾದಕರೆಂದರೆ ಮಾರ್ಗರೇಟ್, ದಲ್ಲಾಕೋಸ್ತ, ಸೆಲ್ಮಿಜೇಮ್ಸ್ ಹೋಮ್ ಸ್ಟ್ರಾಮ್ ಮತ್ತು ಬಾರ್ಬರ್ ಬೆರ್ಗಮನ್ ಮುಂತಾದವರು. ಇವರು ತಮ್ಮ ಬರವಣಿಗೆಯಲ್ಲಿ ಮಾರ್ಕ್ಸ್‌ವಾದ ಹಿನ್ನಲೆಯಲ್ಲಿನ ಮಾರ್ಕ್ಸ್‌ವಾದಿ ಸ್ತ್ರೀವಾದ ಬೆಳೆದು ಬರಲು ಕಾರಣವಾಯಿತು.

ಆರ್ಥಿಕ, ಸಾಮಾಜಿಕ ಸ್ಥಾನಮಾನಗಳಿಗೆ ತಕ್ಕಂತೆ ಮಹಿಳೆಯರು ಪುರುಷರ ಹಾಗೆ ಸಮಾನತೆಯನ್ನು ಕೋರುವುದೇ ಮಾರ್ಕ್ಸ್‌ವಾದಿ ಸ್ತ್ರೀವಾದ. ಇದಕ್ಕೆ ಮೂಲಾಧಾರ ಮಾರ್ಕ್ಸ್‌ವಾದ. ಸಮಾನತೆ, ಸ್ವಾತಂತ್ರ್ಯ, ಮಾನವನ ಘನತೆಯನ್ನು ಸಾರುವ, ಅದಕ್ಕಾಗಿ ಹೋರಾಡುವ ಮಾರ್ಗವನ್ನು ಸೂಚಿಸುವ ಮಾರ್ಕ್ಸ್‌ವಾದ ಸ್ತ್ರೀ ಸಮಸ್ಯೆಗಳನ್ನು ಗುರುತಿಸಿದ್ದಲ್ಲದೆ ತನ್ನದೇ ಆದ ಚೌಕಟ್ಟಿನಲ್ಲಿ ಪರಿಹಾರವನ್ನು ಸೂಚಿಸಿತು.

**ಸಮಾಜವಾದಿ ಸ್ತ್ರೀವಾದ (Socialist Feminism)**

ಇದುವರೆಗೂ ವಿಶ್ಲೇಷಿಸಿದ ಸ್ತ್ರೀವಾದದ ವಿವಿಧ ಬಗೆಗಳಲ್ಲಿ ಅಸಮಾನತೆಯ ಮೂಲವನ್ನು ಯಾವುದಾದರೂ ಒಂದೇ ಒಂದು ಅಂಶಕ್ಕೆ ಸಂಬಂಧಿಸಿದ ಹಾಗೆ ಹುಡುಕಲು ಪ್ರಯತ್ನ ನಡೆದಿದೆ. ಸ್ತ್ರೀ ಶೋಷಣೆಯ ಮೂಲವನ್ನು ಉದಾರವಾದಿ ಸ್ತ್ರೀವಾದಿಗಳು ಲಿಂಗ ತಾರತಮ್ಯದಿಂದ ಕೂಡಿದ ಸಾಮಾಜಿಕ ವ್ಯವಸ್ಥೆಯಿಂದಲೂ, ತೀವ್ರಗಾಮಿ ಸ್ತ್ರೀವಾದಿಗಳು ಜೈವಿಕತೆಯಿಂದಲೂ, ಮಾರ್ಕ್ಸ್‌ವಾದಿಗಳು ವರ್ಗ

ಅಸಮಾನತೆಯಿಂದಲೂ ಶೋಧಿಸಿದರು. ಇಂಥ ಏಕಮುಖ ದೃಷ್ಟಿಕೋನವನ್ನು ಒಪ್ಪಿಕೊಳ್ಳದ ಹಲವು ಸ್ತ್ರೀವಾದಿ ಚಿಂತಕರು ಸ್ತ್ರೀಶೋಷಣೆಯ ಮೂಲವನ್ನು ಹುಡುಕಲು ಬಹು ಆಯಾಮಗಳಿಂದ ಕೂಡಿದ ಪ್ರಸ್ತಾವನೆಯೊಂದರ ಅಗತ್ಯವಿದೆ ಎಂಬ ವಾದವನ್ನು ಹೂಡಿದರು. ಆ ಎಲ್ಲಾ ಅಂಶಗಳೂ ಸೇರಿದ ಒಂದು ಸಮಗ್ರ ದೃಷ್ಟಿಕೋನದಿಂದ ಲಿಂಗತಾರತಮ್ಯವೂ ಸೇರಿದಂತೆ ಸ್ತ್ರೀಯರ ಶೋಷಣೆಗಳಿಗೂ ಕಾರಣವನ್ನು ಹುಡುಕುವ ಪ್ರಯತ್ನವಾಗಬೇಕೆಂದು ಅರಿತ ಕೆಲವು ಸ್ತ್ರೀವಾದಿಗಳು ಸಮಾಜವಾದಿ ಸ್ತ್ರೀವಾದವನ್ನು ಹುಟ್ಟುಹಾಕಿದರು. ಮಿಟಷಲಳಂತೆಯೇ ಹಾಯ್ದಿ ಹಾರ್ಟಮನ್, ಆಲಿಸನ್ ಜ್ಯಾಗರ, ಐರಿಸಯಂಗ ಮುಂತಾದವರು ಸಮಾಜವಾದಿ ಸ್ತ್ರೀವಾದ ಚಿಂತಕರು.

ಮಹಿಳೆಯರು ಕುಟುಂಬದಲ್ಲಿ ದಿನಪೂರ್ತಿ ಮಾಡುವ ಕೆಲಸಗಳಿಗೆ ವೇತನವಿಲ್ಲದೆ ಹೊರಗಿನ ಕೆಲಸಗಳಿಗೆ ಕಡಿಮೆ ವೇತನವನ್ನು ಪಡೆದ ನೆಲೆಯು ಅವರನ್ನು ದಾಸ್ಯಕ್ಕೆ ನೂಕಿದೆ. ಆದ್ದರಿಂದ ಮಾಲೀಕತ್ವದ ರಚನೆಯೇ ಮಹಿಳೆಯರನ್ನು ಗುಲಾಮಗಿರಿಗೆ ಒಳಪಡಿಸಿತು ಎಂಬುದು ಈ ಪಂಥದವರ ನಿಲುವು ಮಹಿಳೆಯರಿಗೆ ಕಡಿಮೆ ವೇತನ, ಭವಿಷ್ಯದಲ್ಲಿ ಉದ್ಯೋಗ ಭರವಸೆಯಿಲ್ಲದ ಕೆಲವು ಕೆಲಸಗಳನ್ನು ನೀಡುವುದರಿಂದ ಉದ್ಯೋಗ ಕ್ಷೇತ್ರದಲ್ಲೂ ಲಿಂಗಾಧಾರಿತ ಶ್ರಮವಿಭಜನೆಯು ಮಹಿಳೆಯರ ವಿರುದ್ಧವಾಗಿ ಕೆಲಸ ಮಾಡುತ್ತದೆ ಎಂಬುದು ಈ ಪಂಥದವರ ಅಭಿಪ್ರಾಯವಾಗಿದೆ. ಪುರುಷರು ತಮ್ಮ ಮನೋಭಾವನೆಯನ್ನು ಬದಲಾಯಿಸಿಕೊಂಡು ಕುಟುಂಬ ಜೀವನದ ಕೆಲಸಗಳಲ್ಲಿ ಭಾಗಿಯಾಗಬೇಕು. ಸ್ತ್ರೀ–ಪುರುಷರ ನಡುವೆ ಸಾಮಾಜಿಕವಾಗಿ ಸಮಾನತೆಯುಂಟಾಗಬೇಕು ಎಂಬುದು ಇವರ ಮುಖ್ಯ ನಿಲುವು.

**ಭಾರತೀಯ ಸ್ತ್ರೀವಾದ (Indian Feminism)**

ಭಾರತೀಯ ಸ್ತ್ರೀವಾದ ವಿವೇಚನಾಯುಕ್ತವಾಗಿ ರಚನೆಯಾಗದೆ ಸಾಮಾಜಿಕ ಸುಧಾರಣೆಯ ಮೂಲಕ ಉಗಮವಾದದ್ದು. ಭಾರತದಲ್ಲಿ ಮಹಿಳಾಭಿವೃದ್ಧಿಗೆ ಮಾರಕವಾಗಿದ್ದ ಸತಿ ಪದ್ಧತಿ, ಬಾಲ್ಯವಿವಾಹ, ದೇವದಾಸಿ ಪದ್ಧತಿ ಮುಂತಾದವುಗಳನ್ನು ಸಮಾಜ ಸುಧಾರಕರು ನಿರ್ಮೂಲನ ಮಾಡಲು ಪ್ರಯತ್ನಿಸಿದರು. ವಿಧವಾ ವಿವಾಹಗಳಿಗೆ ಮಾನ್ಯತೆಯನ್ನು ನೀಡಿದರು. ಗಾಂಧೀಜಿ,ಪುಲೆ, ಪೆರಿಯಾರ್ ಮುಂತಾದವರು ಮಹಿಳಾಭಿವೃದ್ಧಿಗೆ ಶ್ರಮಿಸಿದರು. ಮಹಿಳೆಯರ ವಿಮೋಚನೆಗಾಗಿ ಮಹಿಳಾ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಭಾರತೀಯ ಸ್ತ್ರೀವಾದಿ ಚಿಂತಕರಾದ ಎಸ್. ಮನುಚಕ್ರವರ್ತಿ "ಭಾರತೀಯ ಸ್ತ್ರೀವಾದ" ಪುಸ್ತಕದಲ್ಲಿ ಈ ಚಳವಳಿಯ ಹುಟ್ಟು, ಬೆಳವಣಿಗೆಗೆ, ಪಶ್ಚಿಮದ ಸ್ತ್ರೀವಾದದ ಮಹತ್ವವನ್ನು ಕುರಿತು ಹೇಳಲಾಗಿದೆ.

ಭಾರತೀಯ ಸಮಾಜ ಎನ್ನುವುದು ತೀವ್ರವಾಗಿ ಶ್ರೇಣೀಕರಣಗೊಂಡಿರುವಂಥ ಒಂದು ವ್ಯವಸ್ಥೆ. ಇಲ್ಲಿ ಜಾತಿ ಹಾಗೂ ವರ್ಗಗಳೆರಡೂ ಸಮಾಜದ ವಿಭಜನೆಗೆ ಮೂಲ

ಕಾರಣಗಳಾಗಿವೆ. ಇಂಥ ವ್ಯವಸ್ಥೆಯಲ್ಲಿ ಸ್ತ್ರೀ–ಪುರುಷರಿಬ್ಬರೂ ಶೋಷಣೆಗೆ ಒಳಗಾಗಿದ್ದಾರೆ. ಈ ಶ್ರೇಣೀಕೃತ ಸಮಾಜದಲ್ಲಿ ಲಿಂಗತಾರತಮ್ಯದಿಂದ ಮಹಿಳೆಯರು ಜರ್ಝರಿತರಾಗಿದ್ದಾರೆ. ಇವುಗಳ ವಿರುದ್ಧವೇ ಭಾರತೀಯ ಸ್ತ್ರೀವಾದಿಗಳ ಹೋರಾಟವಾಗಿದೆ. ಸ್ತ್ರೀ–ಪುರುಷರ ನಡುವಿನ ಸಮಾನತೆಯ ಸಮಾಜವನ್ನು, ಮಹಿಳಾ ವಿಮೋಚನೆಯ ಸಮಾಜವನ್ನು ಕಟ್ಟಲು ಬಯಸುತ್ತಿದ್ದಾರೆ.

**ಸ್ತ್ರೀವಾದಿಯೆಂದರೆ ಯಾರು?**

ಮಹಿಳೆಯರ ಹೋರಾಟಕ್ಕೆ ಒತ್ತಾಸೆಯಾಗಿ ನಿಂತು, ಅವರ ಗುಲಾಮತನವನ್ನು ಹೋಗಲಾಡಿಸಲು ಸಹಾಯ ಮಾಡುವವರು, ಸಮುದಾಯದ ಅಭಿವೃದ್ಧಿಗೆ ಶ್ರಮಿಸುವವರು. ಸ್ತ್ರೀಯರ ಸ್ಥಾನಮಾನವನ್ನು ಬದಲಾಯಿಸಲು ಧ್ವನಿ ಕೊಡುವವರು ಸ್ತ್ರೀವಾದಿಗಳು.

ಇಂದಿರಾ ಅವರು "ಸ್ತ್ರೀಪರ ವಿಚಾರಗಳಲ್ಲಿ ಕಾಳಜಿಯನ್ನು ಹೊಂದಿರುವ ಹಾಗೂ ಸ್ತ್ರೀಸಂಬಂಧಿ ವಿಚಾರಗಳಿಗೆ ಸ್ಪಂದಿಸುವ ಮನೋಭಾವವನ್ನು ಬೆಳೆಸಿಕೊಂಡಿರುವವರನ್ನು ಸ್ತ್ರೀವಾದಿಗಳೆಂದು ಕರೆಯಬಹುದು"[೪] ಎಂದಿದ್ದಾರೆ.

**ಸ್ತ್ರೀವಾದದ ಉಗಮ, ಬೆಳವಣಗೆ ಮತ್ತು ವ್ಯಾಪ್ತಿ**

ಸ್ತ್ರೀವಾದವು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಅಸಮಾನತೆ, ಅನ್ಯಾಯ, ದಬ್ಬಾಳಿಕೆ, ಶೋಷಣೆ, ಮೂಢನಂಬಿಕೆ ಮುಂತಾದವುಗಳ ವಿರುದ್ಧ ಮಹಿಳೆಯರು ಸಿಡಿದೇಳುವುದರ ಮೂಲಕ ಮಹಿಳಾ ವಿಮೋಚನೆ ಆಂದೋಲನವಾಗಿ ಉದಯವಾಯಿತು. ಈ ಮಹಿಳಾ ವಿಮೋಚನಾ ಆಂದೋಲನವು ಕ್ರಮೇಣವಾಗಿ ಸ್ತ್ರೀವಾದವಾಗಿ ಪರಿಣಮಿಸಿತು.

ಸರೋಜಿನಿ ಶಿಂತ್ರಿ ಅವರು ಹೇಳುವಂತೆ "ಸ್ತ್ರೀವಾದಿ ಆಂದೋಲನವು ಆರಂಭವಾಗುವುದಕ್ಕೆ ಪ್ರಮುಖ ಕಾರಣವೆಂದರೆ ಸಮಾಜದಲ್ಲಿ ಮಹಿಳೆಗೆ ಕೊಡಲ್ಪಟ್ಟ ಕೆಳದರ್ಜೆಯ ಸ್ಥಾನಮಾನಗಳ ವಿಷಯದಲ್ಲಿ ಆಕೆಗೆ ಹುಟ್ಟಿದ ಅಸಂತೋಷ. ಆಕೆ ಬಂಡೆದ್ದದ್ದು ಪುರುಷ ಪ್ರಧಾನ ಸಮಾಜದ ದಬ್ಬಾಳಿಕೆ, ಅನ್ಯಾಯ, ಅಸಮಾನತೆಯ ಮತ್ತು ಶೋಷಣೆಯ ವಿರುದ್ಧ" ಹೋರಾಡಲು ಮುಂದಾದುದು ಸ್ತ್ರೀವಾದ ಉಗಮವಾಗುವುದಕ್ಕೆ ಕಾರಣವಾಯಿತು.

---

೪. ಸ್ತ್ರೀವಾದಿ ಹಿನ್ನೆಲೆಯಿಂದ ಕನ್ನಡ ಮತ್ತು ತಮಿಳು ಮಹಿಳಾ ಸಾಹಿತ್ಯದ ಅಧ್ಯಯನ : ಪಿಎಚ್.ಡಿ., ಮಹಾಪ್ರಬಂಧ; ಪ್ರಬಂಧಕಾರರು ಎಂ.ರಂಗಸ್ವಾಮಿ, ಪು. ಸಂಖ್ಯೆ: ೨೭.

ಮನುಷ್ಯನ ಇತಿಹಾಸದಲ್ಲಿ ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನನ್ನು ಶೋಷಿಸುವುದು ಸರ್ವೇ ಸಾಮಾನ್ಯ ಇಂಥ ಶೋಷಣೆಗಳಿಗೆ ಮೊದಲು ಒಳಗಾದದ್ದು ಮಹಿಳೆ ಶೋಷಣೆ ಪ್ರಪಂಚಾದ್ಯಂತ ಕಾಲ, ದೇಶ, ಸಮಾಜ ಬದ್ಧವಾಗಿ ತನ್ನದೇ ಆದ ಸ್ವರೂಪವನ್ನು ಹೊಂದಿದೆ. ಶತಮಾನಗಳಿಂದ ವ್ಯವಸ್ಥಿತವಾಗಿ ಎಲ್ಲ ರೀತಿಯಲ್ಲೂ ಬಂಧನಕ್ಕೊಳಪಟ್ಟವಳು ಮಹಿಳೆ. ಇದು ಸಾರ್ವತ್ರಿಕವಾದ ಸಂಗತಿ. ಈ ಶೋಷಣೆಯ ಇತಿಹಾಸ ಬೆಳೆಯುತ್ತಾ ಹೋದಂತೆ ಮಹಿಳೆಯ ದಾಸ್ಯದ, ಅಸಮಾನತೆಯ ಪರಂಪರೆಯೂ ಬೆಳೆಯಿತು. ಕ್ರಮೇಣ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮುಂತಾದ ಪ್ರಮುಖ ವಲಯಗಳಿಂದ ಮಹಿಳೆಯನ್ನು ಹೊರಗೆ ತಳ್ಳಲಾಯಿತು. ಅವಳಿಗೆ ಅಡಿಗೆ ಮನೆಯೇ ಅರಮನೆಯೆಂದು ಅವಳನ್ನು ಕುಟುಂಬಕ್ಕೆ ಕಟ್ಟಿಹಾಕಲಾಯಿತು. ಮಾತೃತ್ವ, ಪತ್ನಿತ್ವ, ಸ್ತ್ರೀತ್ವ, ತಾಯ್ತನ ಮುಂತಾದ ಆದರ್ಶಗಳನ್ನು ಅವಳ ಮೇಲೆ ಹೇರಲಾಯಿತು. ಈ ಆದರ್ಶಗಳೇ ಮಹಿಳೆಯನ್ನು ಆಳಲು ಅನುಕೂಲ ಮಾಡಿಕೊಟ್ಟವು. ಅವಳ ಹಿತವನ್ನು ಕಡೆಗಣಿಸಲಾಯಿತು. ಇಂತಹ ಜಾಗತಿಕ ಇತಿಹಾಸದ ಸಂದರ್ಭಗಳನ್ನು ಅರಿತು ಸ್ತ್ರೀವಾದಿಗಳು ತಮ್ಮ ಅಭಿವೃದ್ಧಿಗೆ ಬಾಧಕವೆಂದು ಭಾವಿಸಿರುವ ಹಲವಾರು ಸಮಸ್ಯಾತ್ಮಕ ಕಲ್ಪನೆಗಳನ್ನು ಬದಲಾಯಿಸಿ ರಚಿಸಲು ಮುಂದಾದರು. ಈ ನಿಟ್ಟಿನಲ್ಲಿ ಮಹಿಳೆಯರು ತಮ್ಮ ಸಾಮಾಜಿಕ, ಧಾರ್ಮಿಕ ಸಂದರ್ಭಗಳಿಗನುಸಾರವಾಗಿ ತಂತಮ್ಮ ಹಿಂದುಳಿದ ನೆಲೆಯನ್ನು ಪ್ರಜ್ಞಾಪೂರ್ವಕವಾಗಿ ಮನಗಂಡು ಹೋರಾಟವನ್ನು ಪ್ರಾರಂಭಿಸಿದರು. ತಾಯಿಯಾಗುವುದು ಗಂಡನಿಗೆ ಸೇವೆ ಮಾಡುವುದು ಸ್ತ್ರೀಯರ ಪ್ರಧಾನ ಕರ್ತವ್ಯ ಎಂಬ ಭಾವನೆಯನ್ನು ಮುಂದಿಟ್ಟು ಅವರ ವೈಯಕ್ತಿಕ ಸಮಸ್ಯೆಗಳನ್ನು ದ್ವಿತೀಯ ದರ್ಜೆಯಲ್ಲಿ ಇಟ್ಟಿರುವುದನ್ನು ಅರಿಯಲು ಒಂದು ತಾತ್ವಿಕತೆಯ ನಿಲುವು ಸಿದ್ಧವಾಯಿತು. ಕ್ರಮೇಣ ಇದು ಸ್ತ್ರೀವಾದವಾಗಿ ಯೌವನಾವಸ್ಥೆಯನ್ನು ಪಡೆದುಕೊಂಡಿತು.

**ಪಾಶ್ಚಿಮಾತ್ಯ ದೇಶಗಳಲ್ಲಿ ಸ್ತ್ರೀವಾದ**

ಪಾಶ್ಚಿಮಾತ್ಯ ದೇಶಗಳಲ್ಲಿ ಸ್ತ್ರೀವಾದ ಚಳವಳಿಯ ಕಲ್ಪನೆ ಎಂಬ ಬೀಜವನ್ನು ಕ್ರಿ.ಶ. ೧೪೦೦ರಲ್ಲೆ ಬಿತ್ತಲಾಯಿತು. ಈ ಚಳವಳಿ ೧೪೦೦ರಿಂದ ೧೭೮೯ರವರೆಗಿನ ಅವಧಿಯಲ್ಲಿ ಹಲವಾರು ಹಂತಗಳನ್ನು ಮುಟ್ಟಿತು. ಅಂದರೆ ಆಗಿಂದಲೇ ಸ್ತ್ರೀಯರು ತಮ್ಮ ಶೋಷಣೆಗೆ ಕಾರಣವಾದ ಪುರುಷಾಪ್ರಾಧಾನ್ಯದ ವಿರುದ್ಧ ಹೋರಾಡಲು ಚಿಂತಿಸಿದರು ಎನ್ನಬಹುದು.

ಪ್ರಪಂಚದಲ್ಲಿ ಎರಡು ಮಹಾಕ್ರಾಂತಿಗಳಾದವು. ಒಂದು ಫ್ರೆಂಚ್ ಮಹಾಕ್ರಾಂತಿ ಮತ್ತೊಂದು ಅಮೇರಿಕಾ ಕ್ರಾಂತಿ. ಫ್ರಾನ್ಸ್‌ನಲ್ಲಿ ಲೂಯಿ ದೊರೆಗಳ ಅರಾಜಕತೆಯ ಆಳ್ವಿಕೆಯಿಂದ ಅನೇಕ ಸಮಸ್ಯೆಗಳನ್ನು ಅನುಭವಿಸುತ್ತಿದ್ದ ಜನರು ಒಟ್ಟಿಗೆ ಸೇರಿ

ರಾಜಪ್ರಭುತ್ವವನ್ನು ಸ್ಥಾಪಿಸಿದರು. ವಿಮೋಚನೆ, ಸಮಾನತೆ, ಸಹೋದರತೆ ಎಂಬ ಹೊಸ ಮೌಲ್ಯಗಳೇ ಈ ಕ್ರಾಂತಿಯ ತಳಹದಿಯಾದವು. ಇಂಗ್ಲೇಂಡಿನಲ್ಲಾದ ಕೈಗಾರಿಕೆಯಿಂದಾಗಿ ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಮಹತ್ತರವಾದ ಬದಲಾವಣೆ-ಯನ್ನುಂಟುಮಾಡಿತು. ಅಮೆರಿಕನ್ ಹಾಗೂ ಫ್ರೆಂಚ್ ಕ್ರಾಂತಿಗಳ ಹಿಂದಿರುವ ಉದಾರವಾದಿ ಸಮಾನತಾವಾದವು ಸ್ತ್ರೀವಾದದ ಹುಟ್ಟಿಗೆ ಪ್ರೇರಣೆಗಳಾದುವು.

ಪಾಶ್ಚಿಮಾತ್ಯ ಸ್ತ್ರೀವಾದದ ಉಗಮ ಮತ್ತು ಬೆಳವಣಿಗೆಯಲ್ಲಿ ಸ್ತ್ರೀಯರ ಪಾತ್ರ ಪ್ರಮುಖವಾದದ್ದು. ಹದಿನೆಂಟನೆಯ ಶತಮಾನದ ಮೇರಿವುಲ್‌ಸ್ಟನ್ ಕ್ರಾಪ್ಟಳಂತೆ ೧೯-೨೦ನೆಯ ಶತಮಾನಗಳ ನಡುವೆ ಇದ್ದ ವರ್ಜಿನಿಯಾ ವುಲ್ಫ್, ೨೦ನೆಯ ಶತಮಾನದ ಚಿಂತಕಮರೆಲ್ಲರ ವಿಚಾರಗಳನ್ನು ಪ್ರಭಾವಿಸಿದ ಸೀಮೋನ್‌ದ ಬೋವಾ ಮುಂತಾದವರು ಅವರಲ್ಲಿ ಪ್ರಮುಖರಾದವರು. ಇವರೆಲ್ಲರೂ ಸ್ತ್ರೀವಾದದ ಬೆಳವಣಿಗೆಯ ಮೊದಲ ಹಂತದ ಚಿಂತಕರೆನಿಸಿಕೊಂಡಿದ್ದಾರೆ. ಇವರು ಸ್ತ್ರೀವಾದದ ಬೆಳವಣಿಗೆಯ ಮೂಲಭೂತ ಪರಿಕಲ್ಪನೆಗಳನ್ನು ರೂಪಿಸಿಕೊಟ್ಟಿದ್ದಾರೆ. ಮೇರಿವುಲಸ್ಟನ್ ಕ್ರಾಫ್ಟ್ ಪಾಶ್ಚಿಮಾತ್ಯ ಸ್ತ್ರೀವಾದಕ್ಕೆ ಬೀಜ ಬಿತ್ತಿದವರಾದರೆ, ಅದನ್ನು ಬೆಳೆಸಿದ ಕೀರ್ತಿ ಸೀಮೋನ್‌ದ ಬೋವಾ ಮತ್ತು ಬೆಟಿಫ್ರೈಡನ್ ಅವರಿಗೆ ಸಲ್ಲುತ್ತದೆ.

ಸ್ತ್ರೀವಾದದ ಮೂಲಭೂತವಾದ ಕಲ್ಪನೆಗಳಾದ ಸಮಾನತೆ, ಸ್ವಾತಂತ್ರ್ಯ ಮುಂತಾದ ಅಭಿಪ್ರಾಯಗಳು ಮೊದಮೊದಲು ಪ್ರಾರಂಭವಾದದ್ದು ಫ್ರಾನ್ಸನಲ್ಲಿಯೇ. ಆದರೆ ಅವುಗಳನ್ನು ಆಧರಿಸಿ ಸ್ತ್ರೀವಾದ ಚಳವಳಿಯಾಗಿ ವ್ಯಾಪಿಸಿದ್ದು ಅಮೆರಿಕ ಹಾಗೂ ಇಂಗ್ಲೆಂಡ್‌ಗಳಲ್ಲಿ ಇದರ ಪರಿಣಾಮವಾಗಿ ಮಹಿಳೆಯರು ಶಿಕ್ಷಣವನ್ನು ಪಡೆಯುವಂತಾಯಿತು. ಐರೋಪ್ಯ ದೇಶಗಳಲ್ಲಿ ಸ್ತ್ರೀಯರು ಶಿಕ್ಷಣವನ್ನು ಮಹಿಳಾ ಎವಾಂಜಲಿಸ್ ಕ್ರಾಂತಿಯ ಮೂಲಕ ಪಡೆದರು. ಹಾಗಾಗಿ ೧೮೨೦ರಿಂದ ಮಹಿಳೆಯರಿಗೆ ಶಿಕ್ಷಣ ಅತ್ಯಾವಶ್ಯಕವಾದದ್ದು ಎಂಬ ಭಾವನೆ ದೃಢತೆಯನ್ನು ಪಡೆಯಿತು. ಆನಂತರ ೧೮೨೬ರಿಂದ ಮಹಿಳೆಯರಿಗೆ ಶಿಕ್ಷಣವನ್ನು ಕಡ್ಡಾಯಗೊಳಿಸಲಾಯಿತು. ಇದು ಮುಂದುವರೆದಂತೆ ಹಲವಾರು ಚಳುವಳಿಗಳು ಒಟ್ಟಿಗೆ ಸೇರಿ ಹೋರಾಡಿದ್ದರಿಂದ ಮತದಾನದ ಹಕ್ಕನ್ನು ಒಳಗೊಂಡಂತೆ ಅನೇಕ ಹಕ್ಕುಗಳನ್ನು ಹಂತಹಂತವಾಗಿ ಮಹಿಳೆಯರು ಪಡೆದರು.

ಇಂಗ್ಲೆಂಡಿನಲ್ಲೂ ಎಲ್ಲ ಸ್ತ್ರೀಪರ ಕಾಳಜಿವುಳ್ಳ ಸಣ್ಣ ಸಣ್ಣ ಸಮಿತಿಗಳೂ ಒಂದು ಸೇರಿ ರಾಷ್ಟ್ರೀಯ ಮಹಿಳಾ ಘಟಕವಾಗಿ ಮಾರ್ಪಟ್ಟು ಕಾರ್ಯನಿರ್ವಹಿಸಿದುವು. ಎಪ್ಪತ್ತರ ಆರಂಭದಲ್ಲಿ ಜರ್ಮನಿ, ಫ್ರಾನ್ಸ್ ಮುಂತಾದ ದೇಶಗಳಲ್ಲೂ ಸಮಾನ ವೇತನ, ಉದ್ಯೋಗವಕಾಶ, ಗರ್ಭಪಾತದ ಹಕ್ಕು ಇವುಗಳನ್ನು ಮಹಿಳೆಯರು ಪಡೆದರು. ಆದರೆ ಮೂರನೆಯ ಜಾಗತಿಕ ದೇಶಗಳ ಮಹಿಳೆಯರಿಗೂ ಶ್ರೀಮಂತ ದೇಶಗಳಾದ ಅಮೆರಿಕ

ಮತ್ತು ಬ್ರಿಟನ್‌ಗಳಲ್ಲಿರುವ ಮಹಿಳೆಯರಿಗೂ ಇರುವ ಸಮಸ್ಯೆಗಳಿಗೆ ವ್ಯತ್ಯಾಸ ಇತ್ತು. ಆದರೂ ಜಾಗತಿಕ ಮಟ್ಟದಲ್ಲಿ ಮಹಿಳೆಯರ ಬಗ್ಗೆ ಪ್ರಜ್ಞಾವಂತಿಕೆ ಏರ್ಪಟ್ಟಿರುವುದನ್ನು ಒಪ್ಪಿಕೊಳ್ಳಲೇಬೇಕು. ಆನಂತರದ ಕೆಲವು ವರ್ಷಗಳಲ್ಲಿ ಮಹಿಳಾ ವಿಮೋಚನೆ ಎಂಬುದು ಜಾಗತಿಕ ಮಟ್ಟದಲ್ಲಿ ಸುದ್ದಿಯಾಯಿತು. ಲಿಂಗತಾರತಮ್ಯ, ಸ್ತ್ರೀವಾದ, ಪುರುಷಾಧಿಕಾರ ಮುಂತಾದ ಪದಗಳು ಆಯಾಯ ದೇಶಗಳ ಭಾಷೆಗಳಲ್ಲಿ ದಿನನಿತ್ಯದ ಬಳಕೆಯಲ್ಲಿ ಬಂದವು. ಸ್ತ್ರೀವಾದ ಚಳವಳಿಯ ಪುನರುಜ್ಜೀವನದಿಂದ ಆಯಾಯ ಸಮಾಜಗಳಲ್ಲಿ ಗುರುತಿಸತಕ್ಕ ಬದಲಾವನೆಗಳಾಗತೊಡಗಿದವು. ಹೀಗೆ ಸ್ತ್ರೀವಾದ ಇಪ್ಪತ್ತನೆಯ ಶತಮಾನದ ಒಂದು ಮಹತ್ತರವಾದ ಹಾಗೂ ಜಗತ್ತಿನ ಆಸಕ್ತಿಯನ್ನು ತನ್ನೆಡೆ ಸೆಳೆದುಕೊಂಡಿರುವ ವಿಷಯವಾಗಿದೆ.

೧೯೬೦ರಿಂದ ೧೯೭೦ರವರೆಗೆ ಮಹಿಳಾ ಚಳುವಳಿ ಸಂಭ್ರಮಿಸುತ್ತಿದ್ದ ಕಾಲ. ೮೦ರಿಂದ ೯೦ರ ಅವಧಿಯಲ್ಲಿ ಎಲ್ಲಾ ವರ್ಷಗಳಲ್ಲೂ, ಎಲ್ಲಾ ದೇಶಗಳಲ್ಲೂ ಸ್ತ್ರೀವಾದ ನೆಲೆ ಕಾಣಿಸತೊಡಗಿತು. ಇಂದು ಅನೇಕ ಸಾಂಸ್ಕೃತಿಕ, ರಾಜಕೀಯ ಗುಂಪುಗಳೂ ಕೂಡ ಸ್ತ್ರೀವಾದದ ವಿಚಾರಗಳನ್ನು ಬಳಸಿಕೊಂಡೇ ಕೆಲಸ ಮಾಡುವಷ್ಟು ಸ್ತ್ರೀವಾದ ಬೆಳೆಯುತ್ತಿದೆ.

ಪಾಶ್ಚಿಮಾತ್ಯ ದೇಶಗಳಲ್ಲಿ ಸ್ತ್ರೀವಾದ ಉಗಮವಾಗುವುದಕ್ಕೆ ಮತ್ತು ವಿಫುಲವಾಗಿ ಬೆಳೆದುಬರುವುದಕ್ಕೆ ಅಲ್ಲಿನ ಮಹಿಳಾ ಸಂಘಟನೆಗಳು, ಮಹಿಳಾ ಚಳವಳಿಗಳು, ಮಹಿಳೆಯರ ಶಿಕ್ಷಣ ಮುಂತಾದವು ಕಾರಣ. ಅಲ್ಲಿನ ಸ್ತ್ರೀವಾದಿಗಳು ತಮ್ಮ ಕೃತಿಗಳಲ್ಲಿ ಸ್ತ್ರೀವಾದಿ ಚಿಂತನೆಗಳನ್ನು ತಮ್ಮ ಸಾಹಿತ್ಯದ ರಚನೆಗಳಲ್ಲಿ ಅಭಿವ್ಯಕ್ತಪಡಿಸಿದ್ದು, ಸ್ತ್ರೀವಾದ ಬೆಳವಣಿಗೆಯಲ್ಲಿ ಅತಿಮುಖ್ಯ ಪಾತ್ರವಹಿಸಿದೆ ಎನ್ನಬಹುದು. ಸ್ತ್ರೀವಾದದ ದೃಷ್ಟಿಕೋನಗಳಿಂದ ಅನೇಕ ಮಾಸಪತ್ರಿಕೆಗಳು, ವಾರಪತ್ರಿಕೆಗಳು ಉದಯಿಸಿದವು. ಇವು ಮಾತ್ರವಲ್ಲದೆ ಸ್ತ್ರೀವಾದಿ ನೆಲೆಯಿಂದ ಹಲವಾರು ಲೇಖನಗಳು ಪ್ರಾರಂಭದಿಂದಲೇ ಪ್ರಕಟವಾದವು. ಅಂದರೆ ಪಾಶ್ಚಿಮಾತ್ಯ ದೇಶಗಳಲ್ಲಿ ಸ್ತ್ರೀವಾದವನ್ನು ಬೆಳೆಸುವಲ್ಲಿ ಸಾಹಿತ್ಯವು ಅಪಾರವಾದ ಕೆಲಸ ಮಾಡಿದೆ ಎನ್ನಬಹುದು.

ಹೀಗೆ ಸ್ತ್ರೀವಾದವು ಜಗತ್ತಿನಾದ್ಯಂತ ವ್ಯಾಪಿಸಿ, ಆಯಾಯ ದೇಶಗಳ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ವಾತಾವರಣಗಳಲ್ಲಿ ಮಹತ್ತರವಾದ ಬದಲಾವಣೆಯನ್ನುಂಟುಮಾಡಿ ಹಂತಹಂತವಾಗಿ ತನ್ನ ಗುರಿಯತ್ತ ಸಾಗುತ್ತಿದೆ. ಫ್ರಾನ್ಸ್ ಮೊದಲುಗೊಂಡು ಐರೋಪ್ಯ ದೇಶಗಳಲ್ಲಿಯೂ ಅದಾದ ಬಳಿಕ ಪೌರ್ವಾತ್ಯ ದೇಶಗಳಲ್ಲೂ ವಿಫುಲವಾಗಿ ಬೆಳೆದುಬರುತ್ತಿದೆ.

**ಭಾರತದಲ್ಲಿ ಸ್ತ್ರೀವಾದ**

ಪಾಶ್ಚಿಮಾತ್ಯ ದೇಶಗಳಲ್ಲಿ ಸ್ತ್ರೀವಾದ ಎಂಬ ಚಿಂತನಾಕ್ರಮ ಬೆಳವಣಿಗೆ ಆದ ಬಳಿಕ ಭಾರತದಲ್ಲೂ ತನ್ನದೇ ಆದ ರೀತಿಯಲ್ಲಿ ಕಾಣಿಸಿಕೊಂಡಿತು. ಭಾರತದಲ್ಲಿ ಸಾಮಾಜಿಕ, ಧಾರ್ಮಿಕ ಸಮಸ್ಯೆಗಳು ತಾಂಡವವಾಡುತ್ತಿದ್ದ ಸಂದರ್ಭದಲ್ಲಿ ಬ್ರಿಟಿಷರು ಕಾಲಿಟ್ಟರು. ಪರಂಪರಾಗತವಾಗಿ ಭಾರತದಲ್ಲಿ ಅಸ್ತಿತ್ವದಲ್ಲಿದ್ದ ಬಹುತೇಕ ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸಲು ಸಹಕರಿಸಿದರು. ಸ್ತ್ರೀಯರ ವಿಷಯದಲ್ಲಷ್ಟೇ ಅಲ್ಲ ದೇಶಾದ್ಯಂತ ಸಾಮಾಜಿಕ ಜೀವನದಲ್ಲಿ ಹಲವಾರು ಮೂಲಭೂತ ಬದಲಾವಣೆಗಳನ್ನು ತರಲು ಪ್ರಯತ್ನಿಸಿದ ಬ್ರಿಟಿಷ್ ಆಳ್ವಿಕೆಯ ಕಾಲವನ್ನು ಆಧುನಿಕ ಯುಗದ ಪ್ರಾರಂಭ ಎಂದೇ ಗುರುತಿಸಬಹುದಾಗಿದೆ.

ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆದು, ಸುಧಾರಣೆಯ ಮನೋಭಾವವನ್ನು ಹೊಂದಿದ್ದ ಭಾರತೀಯ ಪ್ರಗತಿಪರವಾದಿಗಳು ಸಾಮಾಜಿಕ, ಧಾರ್ಮಿಕ ಸುಧಾರಣಾವಾದಿಗಳೂ ಭಾರತೀಯ ಸಮಾಜದ ಅಭಿವೃದ್ಧಿಗಾಗಿಯೂ, ಭಾರತೀಯ ಪುನರ್ ಸೃಷ್ಟಿಗಾಗಿಯೂ ಹಲವಾರು ಸಂಸ್ಥೆಗಳನ್ನು ಸ್ಥಾಪಿಸಿದರು. ಇವರು ಭಾರತೀಯ ಧರ್ಮ, ಸಂಸ್ಕೃತಿಗಳ ಪ್ರತಿಷ್ಠೆಗಳನ್ನು ಸಮಕಾಲೀನ ಭಾರತೀಯ ಸಮಾಜದಲ್ಲಿ ಚಾಲ್ತಿಯಲ್ಲಿದ್ದ ಮೌಲ್ಯಗಳ ಒಳಿತು ಕೆಡಕುಗಳನ್ನು ವಿವೇಚಿಸಿ, ವಿಮರ್ಶಿಸಿ ಶೋಧಿಸಿ ಭಾರತೀಯ ಶಿಷ್ಟಾಚಾರಗಳನ್ನು ಅನುಸರಿಸಲು, ದುಷ್ಟಾಚಾರಗಳನ್ನು ಹೋಗಲಾಡಿಸಲು ಶ್ರಮಿಸಿದರು. ರಾಜಾರಾಮ್ ಮೋಹನರಾಯ್, ಮಹರ್ಷಿಕರ್ವೆ, ಬಿಪಿನ್‌ಚಂದ್ರಪಾಲ್, ಅಂಬೇಡ್ಕರ್, ಲೋಹಿಯಾ, ಮಹಾತ್ಮಗಾಂಧಿ, ಪೆರಿಯಾರ್ ಮುಂತಾದವರ ಕಾಳಜಿಗಳು ಮತ್ತು ಹೋರಾಟಗಳು ಇಲ್ಲದೆ ಹೋಗಿದ್ದಲ್ಲಿ ಭಾರತದ ಮಹಿಳೆಯರ ಸ್ಥಿತಿಗಳು ಇಂದಿಗೂ ಬದಲಾಗುತ್ತಿರಲಿಲ್ಲ.

ಭಾರತೀಯ ಸ್ತ್ರೀವಾದದ ಇತಿಹಾಸ ೧೯ನೆಯ ಶತಮಾನದ ಅಂತ್ಯದಿಂದ ಪ್ರಾರಂಭವಾಗುತ್ತದೆ. ಆರಂಭಕಾಲದಲ್ಲಿ ಸುಧಾರಣಾವಾದಿಗಳೇ ಸ್ತ್ರೀಯರ ಸಮಸ್ಯೆಗಳನ್ನು ಅರಿತುಕೊಂಡು ಅವರ ಅಭಿವೃದ್ಧಿಗಾಗಿ ಶ್ರಮಿಸಿದ್ದಾರೆ. ಆದ್ದರಿಂದ ಭಾರತೀಯ ಸ್ತ್ರೀವಾದವು ಸಾಮಾಜಿಕ ಸುಧಾರಣೆಯ ಹಿನ್ನೆಲೆಯಲ್ಲಿ ಉಗಮವಾದುದಾಗಿದೆ.

ಭಾರತದಲ್ಲಿ ಸ್ತ್ರೀವಾದಿ ಚಳವಳಿ ಒಂದು ವ್ಯವಸ್ಥಿತ ಹೋರಾಟವಾಗಿ ಬೆಳೆಯಲು ಪ್ರಾರಂಭಿಸಿದ್ದು. ಎಪ್ಪತ್ತರ ದಶಕದ ಆನಂತರವೇ. ಅಂದರೆ ೧೯೭೫ರ ನಂತರದ ಕಾಲಾವಧಿಯನ್ನು ಭಾರತೀಯ ಸ್ತ್ರೀವಾದದ ಬೆಳವಣಿಗೆಯ ಕಾಲವೆಂದು ನಿಸ್ಸಂದೇಹವಾಗಿ ಗುರುತಿಸಲಾಗಿದೆ.

೧೯೭೫ರಲ್ಲಿ ಸ್ತ್ರೀಶೋಷಣೆಯ ಅರಿವಿನ ಮಹಾಪೂರದಿಂದಾಗಿ ದೊಡ್ಡ ಪ್ರಮಾಣದಲ್ಲಿ ಜಾಗತಿಕ ನೆಲೆಯಲ್ಲಿ ಪ್ರಾರಂಭವಾದ 'ಸ್ತ್ರೀ ಚಳವಳಿ'ಯನ್ನು ಅತ್ಯಂತ ಉತ್ಸಾಹ, ಸಂಭ್ರಮ, ಕನಸು, ಭ್ರಮೆಗಳೊಂದಿಗೆ ಸ್ವಾಗತಿಸಲಾಯಿತು. ೧೯೭೫ನೇ

ಇಸವಿಯನ್ನು ವಿಶ್ವಸಂಸ್ಥೆಯು 'ಅಂತಾರಾಷ್ಟ್ರೀಯ ಮಹಿಳಾವರ್ಷ' ಎಂದು ಘೋಷಿಸಿತು. ಭಾರತೀಯ ಸ್ತ್ರೀವಾದ ಮಹಿಳಾ ಸಂಘಟನೆಗಳಿಂದ, ಮಹಿಳಾ ಚಳವಳಿಗಳಿಂದ ಮಾತ್ರವಲ್ಲದೆ, ಸಾಹಿತ್ಯ ಕ್ಷೇತ್ರದಲ್ಲೂ ತನ್ನದೇ ಆದ ಸ್ಥಾನವನ್ನು ಪಡೆಯಿತು. ೧೯೭೫ನೇ ವರ್ಷಕ್ಕಿಂತ ಹಿಂದೆಯೂ ಮಹಿಳೆಯರು ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದರು. ಆದರೆ ಅದನ್ನು ಗುರುತಿಸುವ ಔದಾರ್ಯ ಕಂಡುಬಂದಿಲ್ಲ. ೧೯೭೫ರ ಅನಂತರದಲ್ಲಿ ಕೆಲವರು ಸ್ತ್ರೀಸಂವೇದನೆಯಿಂದ ಕೃತಿಗಳನ್ನು ರಚಿಸಿದರು.

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆದ ಧಾರ್ಮಿಕ ಚಳವಳಿಯು ಮಹಿಳೆಯರ ಜೀವನದಲ್ಲಿ ಗಮನಾರ್ಹವಾದ ಬದಲಾವಣೆಯನ್ನುಂಟುಮಾಡಿತು. ಧಾರ್ಮಿಕ ಚಳವಳಿ ಸ್ವಾತಂತ್ರ್ಯದ ಪೂರ್ವದಲ್ಲಿಯೇ ಅದೊಂದು ಜಾತಿಯಾಗಿ ಪರಿವರ್ತನೆಗೊಂಡು ಸಮಾಜದಲ್ಲಿ ಮಹಿಳೆಯರಿಗಿದ್ದ ಅನೇಕ ಬಾಧಕಗಳನ್ನು ಹೋಗಲಾಡಿಸಿ, ಮಹಿಳೆಯರ ಅಭ್ಯುದಯದಲ್ಲಿ ತನ್ನದೇ ಆದ ಪಾತ್ರವನ್ನು ವಹಿಸಿತು. ಈ ಚಳವಳಿ ಮಹಿಳೆಯರ ಸರ್ವಸ್ವಾತಂತ್ರ್ಯಗಳಿಗಾಗಿ, ಏಳಿಗೆಗಳಿಗಾಗಿ ಶ್ರಮಿಸಿತು.

ಹತ್ತೊಂಬತ್ತನೆಯ ಶತಮಾನದಲ್ಲಿ ರಾಜಾರಾಮ್ ಮೋಹನ್‌ರಾಯ್, ದಯಾನಂದ ಸರಸ್ವತಿಯಂಥವರು ಕರ್ನಾಟಕವನ್ನು ಒಳಗೊಂಡಂತೆ ಭಾರತದಲ್ಲಿ ಪ್ರಚಲಿತವಿದ್ದ ಬಾಲ್ಯವಿವಾಹ, ಸತೀಪದ್ಧತಿ, ಮಹಿಳೆಯರಗೆ ಶಿಕ್ಷಣದ ವಂಚನೆ ಈ ಅಂಶಗಳ ವಿರುದ್ಧ ದನಿಯೆತ್ತಿದ್ದರು. ಇದರಿಂದ ಅದೇ ಸಮಯಕ್ಕೆ ಚಿಗುರೊಡೆಯುತ್ತಿದ್ದ ಮಹಾತ್ಮಗಾಂಧಿಯವರ ಅಸಹಕಾರ ಸತ್ಯಾಗ್ರಹದಲ್ಲಿ ಸ್ತ್ರೀಯರು ಮುಕ್ತವಾಗಿ ಭಾಗವಹಿಸಲು ಸಾಧ್ಯವಾಯಿತು. ಈ ಹಂತದ ಸಂಘರ್ಷಗಳನ್ನು ಆ ಕಾಲದ ಅನೇಕ ಕೃತಿಗಳಲ್ಲಿ ಕಾಣಬಹುದು. ಕುವೆಂಪು, ಬೇಂದ್ರೆ, ಕಾರಂತ, ನಿರಂಜನ ಮೊದಲಾದವರ ಕೃತಿಗಳಲ್ಲಿ ಸ್ತ್ರೀಪರ ನಿಲುವನ್ನು ಹುಡುಕುವ ಬಿಡಿಬಿಡಿ ಪ್ರಬಂಧಗಳು ರಚನೆಯಾದಾಗಲ್ಲೆಲ್ಲಾ ಭಾರತೀಯ ಸ್ತ್ರೀವಾದವನ್ನು ಕನ್ನಡದ ನೆಲೆಯಲ್ಲಿ ಮಾತನಾಡುವ ಸಾಧ್ಯತೆಗಳು ತೋರತೊಡಗಿದವು.

ಅನಂತರ ಕರ್ನಾಟಕದಲ್ಲಿ ಸ್ತ್ರೀವಾದದ ಛಾಯೆಯನ್ನು ಬಹುಮುಖ್ಯವಾಗಿ ಗುರುತಿಸಬೇಕಾಗಿರುವುದು ಎಪ್ಪತ್ತರ ದಶಕದಲ್ಲಿ. ಎಪ್ಪತ್ತರ ದಶಕದ ಸ್ತ್ರೀವಾದ ಕರ್ನಾಟಕದಲ್ಲಿ ಹಲವಾರು ದೃಷ್ಟಿಕೋನಗಳಲ್ಲಿ ರೂಪತಾಳಿತು. ಇದು ವರದಕ್ಷಿಣೆ ವಧೂದಹನ, ಲೈಂಗಿಕ ಅತ್ಯಾಚಾರ, ದೇವದಾಸಿ ಪದ್ಧತಿ, ವೇಶ್ಯಾ ಸಮಸ್ಯೆ ಮುಂತಾದ ಮಹಿಳೆಯರ ಸಮಸ್ಯೆಗಳನ್ನು ಪ್ರಧಾನವಾಗಿ ತೆಗೆದುಕೊಂಡಿತು. ಇವುಗಳನ್ನು ಚರ್ಚಿಸಲು ಕೃತಿಗಳನ್ನು, ಪ್ರಬಂಧಗಳನ್ನು, ಅಧ್ಯಯನ ಮಾಡುವ ರೂಪದಲ್ಲಿ ಮಹಿಳಾ ಚಳವಳಿ ಮೊದಲು ರೂಪುಗೊಂಡಿತು. ಕರ್ನಾಟಕದಲ್ಲಿ ಅನೇಕ ಸಂಘಸಂಸ್ಥೆಗಳು, ಸಾಹಿತ್ಯ ಸಂಸ್ಥೆಗಳು ಸ್ಥಾಪನೆಗೊಂಡು ಸ್ತ್ರೀಪರವಾದ ಚಿಂತನೆಗಳ ಬಗ್ಗೆ ಚರ್ಚಿಸಿದವು.

ಮಹಿಳೆಯರಿಗೆ ಸೌಲಭ್ಯಗಳನ್ನು ಒದಗಿಸಿಕೊಡುವ ಕಾರ್ಯದಲ್ಲಿ ಈ ಸಂಸ್ಥೆಗಳು ತೊಡಗಿದವು. ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ ಲೇಖಕಿಯರ ಸಂಘ ಮೊದಲಾದವು. ಸ್ತ್ರೀಪರವಾದ ಕಾಳಜಿ ಮತ್ತು ಸ್ತ್ರೀವಾದದ ಬಗ್ಗೆಯೇ ವಿಚಾರಸಂಕಿರಣಗಳನ್ನು ಏರ್ಪಡಿಸಿದವು. ಗ್ರಾಮಾಂತರ ಪ್ರದೇಶಗಳಲ್ಲಿ ಬೇರೆ ಬೇರೆ ಸಂಘಟನೆಗಳು ಇದನ್ನು ಅನುಸರಿಸಿದವು. ಈ ಗೋಷ್ಠಿಗಳಲ್ಲಿ ಮಹಿಳಾ ಕಾವ್ಯ ಕಥೆ, ಇತರ ಸಾಹಿತ್ಯ ಪ್ರಕಾರಗಳ ಶೀರ್ಷಿಕೆಗಳ ಅಡಿಯಲ್ಲಿ ಮಾತನಾಡುವ ಪ್ರಬಂಧ ಮಂಡಿಸುವ ಅವಕಾಶಗಳು ಬೇರೆ ಬೇರೆ ಲೇಖಕಿಯರಿಗೆ ದೊರೆತು ಭಿನ್ನ ಭಿನ್ನ ಅಭಿಪ್ರಾಯಗಳು ಮಂಡಿತವಾಗಿ ಕರ್ನಾಟಕದ ಸ್ತ್ರೀವಾದದ (ಭಾರತೀಯ ಸ್ತ್ರೀವಾದ) ವ್ಯಾಪ್ತಿಯು ವಿಶಾಲವಾಗತೊಡಗಿತು. ಒಟ್ಟಿನಲ್ಲಿ ಸ್ತ್ರೀವಾದ ಚಿಂತನಾಕ್ರಮದಲ್ಲಿ ಸಾಮಾಜಿಕ ಚಳವಳಿಯಾಗಿ ರೂಪುಗೊಂಡು ತನ್ನದೇ ಆದ ಸ್ಥಾನವನ್ನು ಪಡೆದಿದೆ.

# ಅಧ್ಯಾಯ ೨

## ವ್ಯಾಸಭಾರತ ಸಂಕ್ಷಿಪ್ತ ಪರಿಚಯ

**ಮಹಾಭಾರತ:**

ಮಹಾಭಾರತವು ರಾಮಾಯಣದಂತೆ ಭಾರತೀಯರ ಧರ್ಮ, ಸಂಸ್ಕೃತಿ ನಾಗರಿಕತೆಗಳ ಸಮಗ್ರದರ್ಶನ ಮಾಡಿಕೊಡುವ ಅನನ್ಯ ಚೇತನಶಕ್ತಿ.

ಜನಾಂಗದ ಎಲ್ಲ ಆಸೆ, ಆಕಾಂಕ್ಷೆ, ಸಾಧನೆ ಸಿದ್ಧಿಗಳ ಅನುಭವಗಳನ್ನು ಏಕತ್ರ ಸೇರಿಸಿಕೊಂಡಿರುವ ಭಂಡಾರವಿದು. ವೇದ, ವೇದಾಂಗ, ಇತಿಹಾಸ, ಲೋಕ ವ್ಯವಹಾರ, ಆತ್ಮ ವ್ಯವಹಾರ ಎಲ್ಲ ಶಾಸ್ತ್ರಗಳ ಸಾರಸರ್ವಸ್ವವಾಗಿ ಅವುಗಳ ತತ್ತ್ವವನ್ನು ಸಂಕ್ಷೇಪವಾಗಿಯೂ, ಸವಿಸ್ತಾರವಾಗಿಯೂ ನಿರೂಪಿಸುವ ವಿಶ್ವಕೋಶವಿದು.

"ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ವಿಷಯದಲ್ಲಿ ಈ ಗ್ರಂಥದಲ್ಲಿ ಏನಿದೆಯೋ ಅದು ಬೇರೆಡೆಯಲ್ಲಿದೆ ಇಲ್ಲಿ ಏನಿಲ್ಲವೋ ಅದು ಬೇರೆ ಎಲ್ಲಿಯೂ ಇಲ್ಲ" ಎಂಬ ಮಾತು ಜನಜನಿತವಾಗಿದೆ. ಹಿಂದೆ ದೇವತೆಗಳು ತಕ್ಕಡಿ ಹಿಡಿದು ವೇದಗಳೊಡನೆ 'ಭಾರತ'ವಿಟ್ಟು ತೂಕಮಾಡಿ ನೋಡಿದಾಗ ಮಹತ್ತಿನಲ್ಲೂ, ಭಾರದಲ್ಲೂ ಶ್ರೇಷ್ಠವೆಂದು ಕಂಡುಬಂದುದರಿಂದ 'ಮಹಾಭಾರತ' ಎನಿಸಿಕೊಂಡಿತಂತೆ.

ಪರಂಪರಾಗತ ನಂಬಿಕೆಯೆಂದರೆ ಸುಮಾರು ಒಂದು ಲಕ್ಷಶ್ಲೋಕಗಳಿಗಿಂತಲೂ ಅಧಿಕ ಗಾತ್ರದ ಗ್ರಂಥದ ಕರ್ತೃವೆಂದರೆ ವ್ಯಾಸರು. ಆದರೆ ಇಡೀ ಮಹಾಭಾರತ ಗ್ರಂಥವು ರಚಿತವಾಗಲು ಸು. ೮–೯ ಶತಮಾನಗಳು ಹಿಡಿದಿರಬೇಕು. ಇದಕ್ಕೆ ಒಬ್ಬನೇ ಕರ್ತೃವಿಲ್ಲ. ಗ್ರಂಥದ ಬೆಳವಣಿಗೆಯಲ್ಲಿ ಮೂರು ಘಟ್ಟಗಳು ಸ್ಪಷ್ಟವಾಗಿ ಕಾಣುತ್ತವೆ ಎಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ವ್ಯಾಸರ ವಿವರವೆಂದರೆ ಮಹಾಭಾರತ ಕೃತಿಯಲ್ಲಿಯೇ ತಿಳಿಸಿರುವಂತೆ ಇವರು ಸತ್ಯವತಿ–ಪರಾಶರರ ಪುತ್ರ. ಸತ್ಯವತಿ ಇನ್ನು ಕನ್ಯೆಯಾಗಿದ್ದಾಗಲೇ ಯಮುನಾ ದ್ವೀಪದಲ್ಲಿ ಹುಟ್ಟಿದರು. ಹುಟ್ಟುತ್ತಿದ್ದ ಹಾಗೆಯೇ ಬೆಳೆದು ದೊಡ್ಡವರಾಗಿ ವೇದ ವೇದಾಂಗ ಇತಿಹಾಸ ಪಡೆದರು. ಬ್ರಹ್ಮರ್ಷಿಗಳಾದ ಇವರು ವೇದವನ್ನು ನಾಲ್ಕಾಗಿ ವಿಂಗಡಿಸಿ ವ್ಯಾಸನೆಂಬ ಹೆಸರು ಪಡೆದರು. ಕೌರವ–ಪಾಂಡವರ ಚರಿತ್ರೆಯನ್ನು 'ಭಾರತವಾಗಿ' ತಮ್ಮ ಶಿಷ್ಯರಿಗೆ ಹೇಳಿದರು. ವೇದವ್ಯಾಸರು ಮಹಾಭಾರತಕಾರರು ಮಾತ್ರವಲ್ಲದೇ ಮಹಾಭಾರತದ ಒಂದು ಪಾತ್ರವೂ ಆಗಿದ್ದಾರೆ.

ಕೆಲವು ಪಾಶ್ಚಾತ್ಯ ವಿಮರ್ಶಕರು "ವ್ಯಾಸರೆಂಬುದು ಕಲ್ಪಿತ ವ್ಯಕ್ತಿ ; ಭಾರತವನ್ನು ಬರೆದವರು ಯಾರೋ ಗೊತ್ತಿಲ್ಲ ; ಗಾಥಾರೂಪವಾಗಿ ಜನರಲ್ಲಿ ಪ್ರಚುರವಾಗಿದ್ದ ಕೌರವ ಪಾಂಡವರ ವೀರಕಥೆಯನ್ನು ಯಾವನೋ ಮಹಾಕವಿ ಮೊದಲು ಮೂಲಭಾರತವಾಗಿ ರಚಿಸಿರಬಹುದು" ಎನ್ನುತ್ತಾರೆ. ವ್ಯಾಸರ ಜನ್ಮ ವಿಚಾರ, ಬೆಳವಣಿಗೆ ವೇದ ವಿಂಗಡನೆ,

೧೮ ಪುರಾಣ ಮತ್ತು ಉಪಪುರಾಣಗಳ ರಚನೆ, ಹೆಚ್ಚಿನ ದೀರ್ಘಾಯಸ್ಸು ಇವುಗಳನ್ನೆಲ್ಲಾ ಗಮನಿಸಿದಾಗ ವ್ಯಾಸ ಒಬ್ಬನೇ ಎಂಬ ವಿಚಾರ ಅಸಂಭಾವ್ಯವೆನಿಸುತ್ತದೆ. ಆದ್ದರಿಂದಲೇ ದೇವಿಭಾಗವತ, ವಿಷ್ಣುಪುರಾಣ ಮುಂತಾದ ಕೆಲವು ಗ್ರಂಥಗಳು ವ್ಯಾಸನೆಂಬುವರು ಒಬ್ಬರಲ್ಲ ಹಲವಾರು ವ್ಯಕ್ತಿಗಳು ಎಂಬ ಅಭಿಪ್ರಾಯ ನೀಡುತ್ತದೆ.

ನೂರು ವರ್ಷಗಳಿಂದ ಸಂಶೋಧನೆ ನಡೆಸಿದ ಜರ್ಮನ್, ಅಮೆರಿಕನ್ ಇಂಗ್ಲಿಷ್, ಫ್ರೆಂಚ್ ಮತ್ತು ಭಾರತೀಯ ವಿದ್ವಾಂಸರು ಮಹಾಭಾರತವು ಯಾರೊಬ್ಬರಿಂದಲೂ ಒಂದು ಜೀವಿತ ಕಾಲದಲ್ಲಿ ರಚಿತವಾದದ್ದಲ್ಲ ಎಂಬ ತೀರ್ಮಾನಕ್ಕೆ ಬರುತ್ತಾರೆ. ಇತ್ತೀಚೆಗೆ ವಿಂಟರ್ ನಿಟ್ಸ್ ಎಂಬ ವಿದ್ವಾಂಸರು ಕ್ರಿ.ಪೂ.೪೦೦ರಿಂದ ಕ್ರಿ.ಶ.೪೦೦ರವರೆಗೆ ಎಂದು ಇದರ ಹರವನ್ನು ೮೦೦ ವರ್ಷಗಳವರೆಗೆ ವಿಸ್ತರಿಸುತ್ತಾರೆ. ಅಂದರೆ ಸುಮಾರು ೧೫೦೦ ವರ್ಷಗಳ ಕೆಳಗೇ ಅದು ಬೆಳೆದು ಇಂದಿರುವ ರೂಪವನ್ನು ತಾಳಿತು. ಅಂದರೆ ಕೌರವ ಪಾಂಡವರ ಯುದ್ಧ ಕ್ರಿ.ಪೂ. ೪೦೦ಕ್ಕಿಂತಲೂ ಹಿಂದೆಯೇ ನಡೆದಿರಬೇಕು. ಇದಕ್ಕೆ ಕ್ರಿ.ಪೂ. ೧೦ನೆಯ ಶತಮಾನಕ್ಕಿಂತ ಈಚೆ ಇರಲಾರದು ಎಂಬ ಮೆಗ್ಡಾನಲ್‌ರವರು ಅಭಿಪ್ರಾಯಪಡುತ್ತಾರೆ.

ಒಟ್ಟಿನಲ್ಲಿ ಮಹಾಭಾರತದ ರಚನೆಗೆ ಸುಮಾರು ೮-೯ ಶತಮಾನಗಳ ಕಾಲ ಹಿಡಿದಿರಬೇಕು. ಯಜುರ್ವೇದದಲ್ಲಿ ಕುರು ಮತ್ತು ಪಾಂಚಾಲ ರಾಜ್ಯಗಳನ್ನು ಸಂಯುಕ್ತವಾಗಿ ಹೇಳಿದೆ. ಮೊದಲು ಬೇರೆ ಬೇರೆ ಬಣ್ಣಕ್ಕೆ ಸೇರಿದ್ದ ನೆರೆಯ ರಾಜ್ಯಗಳಾಗಿದ್ದು ಕೊನೆಗೆ ಒಂದಾಗುತ್ತದೆ. ಸಂಘರ್ಷದ ಬಗ್ಗೆ ಪ್ರಚಲಿತವಾಗಿದ್ದ ಹಲ ಕೆಲವು ಹಾಡುಗಳನ್ನು ಸೇರಿಸಿ ಸಂಕ್ಷಿಪ್ತವಾದ ವೀರಾಗಾಥಾ ಕಾವ್ಯವು ಮೊದಲು ಇದ್ದಿರಬೇಕು.

ಈ ಗ್ರಂಥ ವಿಕಾಸದಲ್ಲಿ ಮೂರು ಘಟ್ಟಗಳನ್ನು ಪರಾಮರ್ಶಿಸಲಾಗುತ್ತದೆ. ಮೊದಲನೆಯ ಘಟ್ಟದಲ್ಲಿ ಬ್ರಹ್ಮನಿಗೆ ಮಾನ್ಯತೆಯಿದೆ. ವೇದಗಳಲ್ಲಿ ಬ್ರಹ್ಮನಿಗೆ ಉನ್ನತ ಸ್ಥಾನವಿಲ್ಲ ಬುದ್ಧನ ಕಾಲದಲ್ಲಿ ಬ್ರಹ್ಮನಿಗೆ ಪ್ರಾತಿನಿಧ್ಯವಿತ್ತೆಂದು ಬೌದ್ಧ ಗ್ರಂಥಗಳಿಂದ ತಿಳಿದುಬರುತ್ತದೆ. ಆದುದರಿಂದ ಇದು ವೇದಗಳ ಅನಂತರದ ಮತ್ತು ಬುದ್ಧನಿಗೆ ಹಿಂದಿನ ಕಾಲವಾಗಿದ್ದು ಕ್ರಿ.ಪೂ. ೫-೬ನೇ ಶತಮಾನವಿರಬಹುದು. ಆಗ ಗ್ರಂಥದ ಶ್ಲೋಕ ಸಂಖ್ಯೆ ೮೮೦೦ ಎರಡನೇ ಘಟ್ಟದ ಕಾಲ ಸು. ಕ್ರಿ.ಪೂ. ೩೦೦. ಈ ಸಮಯದಲ್ಲಿ ಮಹಾಭಾರತದಲ್ಲಿ ಶ್ರೀಕೃಷ್ಣನು ಭಗವಂತನ ಅವತಾರವೆಂದು ಮನ್ನಣೆ ಪಡೆದಿದ್ದನು. ಕ್ರಿ.ಪೂ. ೩೦೦ರ ವೇಳೆಗೆ ಭಾರತಕ್ಕೆ ಬಂದಿದ್ದ ಮೆಗಾಸ್ತನೀಸನು ಭಾರತೀಯರು ಶ್ರೀಕೃಷ್ಣನನ್ನು ಪರದೇವತೆಯನ್ನಾಗಿ ಪೂಜಿಸುತ್ತಿದ್ದಾರೆಂದು ಹೇಳಿದ್ದಾರೆ. ಆದ್ದರಿಂದ ಇದು ಅವನಿಗಿಂತಲೂ ಹಿಂದಿನ ಕಾಲ. ಆಗ ಗ್ರಂಥದ ಶ್ಲೋಕ ಸಂಖ್ಯೆ ೨೪,೦೦೦ಕ್ಕೆ ಏರಿತ್ತು. ಮೂರನೇ ಘಟ್ಟದಲ್ಲಿ ಮಹಾಭಾರತವು ಸ್ಮೃತಿ ಗ್ರಂಥಗಳ ಸ್ಥಾನ

ಪಡೆದಿದ್ದಿರಬೇಕು. ಕ್ರಿ.ಶ. ೫ನೆಯ ಶತಮಾನದ ಶಿಲಾಶಾಸನದಲ್ಲಿ ಪವಿತ್ರ ಸ್ಮೃಗ್ರಂಥವಾದ ಮಹಾಭಾರತದ ಪ್ರವಚನ ಕಾರ್ಯಕ್ಕಾಗಿ ಭೂಮಿಯನ್ನು ದತ್ತಿಕೊಟ್ಟಿರುವ ಉಲ್ಲೇಖವಿದೆ. ಆದ್ದರಿಂದ ಇದಕ್ಕೆ ಹಿಂದೆಯೇ ಕ್ರಿ.ಶ.ಸುಮಾರು ೩೦೦ರ ವೇಳೆಗೆ ಇದು ಈಗಿನ ರೂಪವನ್ನು ತಾಳಿ ಒಂದು ಲಕ್ಷಶ್ಲೋಕದ ಗ್ರಂಥವಾಗಿತ್ತು.

ಒಟ್ಟಿನಲ್ಲಿ ಭಾರತವು ಹಿಂದೆ ಪ್ರಾಯಿಕವಾಗಿ ಬಾಯಿಪಾಠವಾಗಿದ್ದು ಪೌರಾಣಿಕರು ಅದನ್ನು ಹೇಳುವಾಗ ಮಧ್ಯೆ ಮಧ್ಯೆ ವಿವರಣೆಗಳನ್ನೂ ಉಪಕಥೆಗಳನ್ನೂ ಹೇಳುತ್ತ ಅವು ಕ್ರಮವಾಗಿ ಮೂಲದಲ್ಲಿ ಸೇರಿ ಹೋದದ್ದು ಈ ಬೆಳವಣಿಗೆಗೆ ಒಂದು ಬಹುಮುಖ್ಯ ಕಾರಣ ಎನ್ನಬಹುದು.

ಮೂಲ ಕಾವ್ಯವಸ್ತುವಿನ ಸುತ್ತ ಲೆಕ್ಕವಿಲ್ಲದಷ್ಟು ಕಾವ್ಯೇತ್ತರ ವಸ್ತುಗಳು ನೇಯ್ದುಕೊಂಡಿವೆ. ಭಿನ್ನ ಕಾಲದ ವಿಚಾರ ಪರಂಪರೆಗಳಂತೆ ಭಿನ್ನ ಸಂಪ್ರದಾಯಗಳ ವಿಚಾರಗಳೂ ಸೇರಿವೆ. ಒಟ್ಟಿನಲ್ಲಿ ಪ್ರಾಚೀನ ಭಾರತದ ಸಕಲ ವಿದ್ಯಾಸಾರವಿದೆನ್ನಬಹುದು. 'ವ್ಯಾಸೋಚ್ಛಿಷ್ಟಂ ಜಗತ್ಸರ್ವಮ್' ಎಂಬ ಹೇಳಿಕೆಯಂತೆ ಚರಿತ್ರೆ, ಭೂಗೋಳ, ಭಕ್ತಿ, ನೀತಿ, ಧರ್ಮ, ತತ್ವಸಿದ್ಧಾಂತ, ಕಥೆವಿಜ್ಞಾನ, ರಾಜನೀತಿ ಇತ್ಯಾದಿ ಸಕಲಗಳೆಲ್ಲವೂ ಇದರಲ್ಲಿ ತುಂಬಿವೆ. ಇಂಥ ವಿರಾಟ್‌ಕೃತಿಯನ್ನು ಮುದ್ರಿಸುವಾಗ ಮುಖ್ಯವಾಗಿ ಎರಡು ಭಿನ್ನ ಪಾಠಕ್ರಮಗಳನ್ನು ಗುರುತಿಸುವುದುಂಟು ಔತ್ತರೇಯ, ದಾಕ್ಷಿಣಾತ್ಯ ಇವುಗಳಲ್ಲಿ ಮತ್ತೆ ಕಾಶ್ಮೀರ ಬಂಗಾಲಿ, ನೇಪಾಲಿ, ದೇವನಾಗರಿ, ತೆಲುಗು, ಮಲಯಾಳ ಮುಂತಾದವುಗಲಿವೆ. ದೇವಬೋಧ, ಅರ್ಜುನಮಿಶ್ರ, ನೀಲಕಂಠ ಮುಂತಾದ ವಿಭಿನ್ನ ವ್ಯಾಖ್ಯಾನಕಾರರ ಪಠಾಂತರಗಳೂ ಉಂಟು ಇವುಗಳನ್ನೆಲ್ಲಾ ಸಂಗ್ರಹಿಸಿ ಮೂಲಪಾಠ–ಗಳನ್ನು ಗುರುತಿಸುವ ಕಾರ್ಯವನ್ನು ಪುಣೆಯ ಭಂಡಾರ್ಕರ್ ಸಂಶೋಧನಾ ಸಂಸ್ಥೆ ಮಾಡಿದೆ. ಡಾ. ವಿ.ಎಸ್.ಸುಕತಣ್ಕರ ಪರಿಸ್ಕೃತ ಆವೃತ್ತಿಯನ್ನು ಹೊರತಂದಿದ್ದಾರೆ. ಕುರುಪಾಂಚಾಲ ವಂಶಗಳ ಪ್ರಮುಖ ದಾಯಾದಿ ಕಲಹವೇ ಮುಖ್ಯ ಕಥಾವಸ್ತು. ಈ ಕೃತಿಯು ಜಯ, ಭಾರತ ಮತ್ತು ಮಹಾಭಾರತ ಎಂಬ ಮೂರು ಹೆಸರುಗಳಿಂದ ಕರೆಯಲ್ಪಟ್ಟಿದೆ. ಗ್ರಂಥಕ್ಕೆ ಮೂರು ಪ್ರಾರಂಭ ಶ್ಲೋಕಗಳಿವೆ.

೧. ಆದ್ಯಂ ಪುರು, ಷಮೀಶಾನಂ – ಎಂಬುದು ಸೂತಪೌರಾಣಿಕನ ಆರಂಭ

೨. ಗುರುವೇ ಪ್ರಾಜ್ಞಮಸ್ಕೃತ – ಎಂಬುದು ವೈಶಂಪಾಯನನ ಆರಂಭ

೩. ನಾರಾಯಣಂ ನಮಸ್ಕೃತ್ಯಂ – ಇದು ಯಾರದೆಂಬುದು ತಿಳಿಯದು ಎಂದು

ಎ.ಆರ್.ಕೃಷ್ಣಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ.

ವೇದವ್ಯಾಸರು ಮಹಾಭಾರತವನ್ನು ತಮ್ಮ ಶಿಷ್ಯರಾದ ವೈಶಂಪಾಯನನಿಗೆ ಹೇಳುತ್ತಾರೆ. ಅವನು ಅದನ್ನು ಜನಮೇಜಯನ ಸರ್ಪಯಾಗ ಕಾಲದಲ್ಲಿ ವ್ಯಾಸರ

ಅಪ್ಪಣೆಯ ಮೇರೆಗೆ ಅಲ್ಲಿನೆರೆದಿರುವ ಮುನಿಗಳು ಮತ್ತು ಜಯಮೇಜಯನಿಗೂ ಹೇಳುತ್ತಾರೆ. ಇದನ್ನು ಸೂತಪುರಾಣಿಕರು ನೈಮಷಾರಣ್ಯದಲ್ಲಿ ಸೇರಿದ ಋಷಿಗಳಿಗೆ ಬೋಧಿಸುತ್ತಾರೆ.

ಮೂಲಕರ್ತೃವ್ಯಾಸ ನಂತರ ಅದನ್ನು ವೈಶಂಪಾಯನನು ವಿಸ್ತರಿಸಿ ಹೇಳಿದನು. ಮುಂದೆ ಸೂತಪುರಾಣಿಕನು ಅದನ್ನು ಇನ್ನಷ್ಟು ವಿಸ್ತರಿಸಿ ಹೇಳಿದನು. ಒಟ್ಟಿನಲ್ಲಿ ಈಗ ಇರುವ ಭಾರತವೆಲ್ಲಾ ವೈಶಂಪಾಯನನ ಮಾತಿನಲ್ಲಿಯೇ ಇದೆಯೇ ಹೊರತು ವ್ಯಾಸರು ಬರೆದ ಅಥವಾ ಬರೆಸಿದ ಗ್ರಂಥವನ್ನು ಅವನು ಓದಿದಂತೆಯೂ ಇಲ್ಲ.

ಮಹಾಭಾರತದಲ್ಲಿ ಮೊದಲು ಲೋಮಹರ್ಷಣನ ಮಗನಾದ ಉಗ್ರಶ್ರಮನೆಂಬ ಸೂತ ಪೌರಾಣಿಕನು ನೈಮಿಷಾರಣ್ಯದಲ್ಲಿ ಶೌನಕನೆಂಬ ಕುಲಪತಿಯು ನಡೆಸುತ್ತಿದ್ದ ಹನ್ನೆರಡು ವರ್ಷದ ಸತ್ರಕ್ಕೆ ಬರುತ್ತಾನೆ. ಅಲ್ಲಿದ್ದ ಮುನಿಪುಂಗದವರು ಅವನನ್ನು ಬರಮಾಡಿಕೊಂಡು ಉಪಚರಿಸುತ್ತಾರೆ. ಅವನು ವಿಶ್ರಾಂತಿ ಹೊಂದಿದ ಮೇಲೆ ಅವನೆಲ್ಲಿಂದ ಬಂದ ಎಂಬ ವಿವರಗಳನ್ನು ಕೇಳಿ, ಕಥೆಗಳ ಬಗ್ಗೆ ಆಸಕ್ತಿ ಹೊಂದಿದ್ದಾರೆ. ಅವನು ಜಯಮೇಜಯನ ಸರ್ಪಯಾಗಕ್ಕೆ ಹೋಗಿದ್ದನೆಂದೂ, ಅಲ್ಲಿ ವೈಶಂಪಾಯನನು ವ್ಯಾಸರಿಂದ ಕೇಳಿದ ಕಥೆಗಳನ್ನು ವಿವರಿಸಲು ಅವುಗಳನ್ನು ಕೇಳಿ ಅನೇಕ ತೀರ್ಥಕ್ಷೇತ್ರಗಳಿಗೂ ಕೌರವ ಪಾಂಡವರಿಗೆ ಯುದ್ಧ ನಡೆದ ಸಮಂತ ಪಂಚಕಕ್ಕೂ ಹೋಗಿ ಬಂದಿದ್ದನೆಂದೂ ಹೇಳಿ ಅವರಿಗೆ ಯಾವ ಕಥೆ ಇಷ್ಟವೆಂದು ಕೇಳುತ್ತಾನೆ. ಅವರು ವೇದಾರ್ಥದಿಂದ ನಿಬಿಡವಾಗಿರುವ ಭಾರತದ ಕಥೆಯನ್ನು ಅಪೇಕ್ಷಿಸುತ್ತಾರೆ. ನೈಮಿಷಾರಣ್ಯದಲ್ಲಿ ಮಹಾಭಾರತಕ್ಕೆ ೧೮ ಪರ್ವಗಳಿವೆ. ಆದಿ, ಸಭಾ, ಅರಣ್ಯ, ವಿರಾಟ, ಉದ್ಯೋಗ, ಭೀಷ್ಮ, ದ್ರೋಣ, ಕರ್ಣ, ಶಲ್ಯ, ಸೌಪ್ತಿಕ, ಸ್ತ್ರೀ, ಶಾಂತಿ, ಅನುಶಾಸನ, ಅಶ್ವಮೇಧಿಕ ಆಶ್ರಮವಾಸಿಕ, ಮೌಸಲ, ಮಹಾಪ್ರಸ್ಥಾನ, ಸ್ವರ್ಗಾರೋಹಣ.

ಮೂಲಕಥೆ ಬ್ರಹ್ಮನಿಂದ ಆರಂಭವಾಗುತ್ತದೆ. ಮುಂದೆ ಕುರುವಂಶದ ಅಶ್ವಮೇಧದತ್ತನವರೆಗಿನ ಸುಮಾರು ೪೮ ತಲೆಮಾರುಗಳ ವಿವರ ಬರುತ್ತದೆ. ಸಂತನುವಿನ ಮಗ ಭೀಷ್ಮ. ಅವನ ತಮ್ಮನ ಮಕ್ಕಳೇ ಧೃತರಾಷ್ಟ್ರ ಮತ್ತು ಪಾಂಡು. ಅವರ ಮಕ್ಕಳೇ ಕೌರವರು ಮತ್ತು ಪಾಂಡವರು. ದಾಯಾದಿ ಮತ್ಸರ ಬಾಲ್ಯದಿಂದಲೇ ಇವರಲ್ಲಿ ಕಾಣಬರುತ್ತದೆ. ಅಖಂಡ ಸಾಮ್ರಾಜ್ಯವು ತನ್ನ ಮಕ್ಕಳಿಗೇ ಸೇರಲೆಂಬ ಧೃತರಾಷ್ಟ್ರನ ದುರಾಲೋಚನೆ ಇದಕ್ಕೆ ಪೂರಕವಾಗಿ ದುರ್ಯೋಧನ ಅರಗಿನ ಮನೆ ನಿರ್ಮಿಸಿದ್ದು. ಪಾಂಡವರು ತಪ್ಪಿಸಿಕೊಂಡು ಅಜ್ಞಾತರಾಗಿದ್ದುಕೊಂಡು ದ್ರೌಪದಿಯನ್ನು ಸ್ವಯಂವರದಲ್ಲಿ ಗೆದ್ದಿದ್ದು ಮುಂದೆ ಪಾಂಡವರ ವೈಭವ, ರಾಜಸೂಯಯಾಗದ ಹೆಮ್ಮೆ ಇವುಗಳನ್ನೆಲ್ಲಾ ಕಂಡು ಮತ್ಸರದಿಂದ ದ್ಯೂತಕ್ಕೆ ಆಹ್ವಾನಿಸುತ್ತಾನೆ. ಯುಧಿಷ್ಠಿರನನ್ನು

ವಂಚನೆಯಿಂದ ಗೆದ್ದು ೧೨ ವರ್ಷಗಳ ವನವಾಸ ಮತ್ತು ೧ ವರ್ಷ ಅಜ್ಞಾತವಾಸದ ನಿಯಮದಂತೆ ಕಾಡಿಗೆ ಕಳುಹಿಸುತ್ತಾನೆ.

ಸತ್ಯವ್ರತರಾದ ಪಾಂಡವರು ಹನ್ನೆರಡು ವರ್ಷಗಳ ವನವಾಸ ಮತ್ತು ಒಂದು ವರ್ಷದ ಅಜ್ಞಾತವಾಸವನ್ನೂ ಮುಗಿಸಿ ಬಂದು ರಾಜ್ಯ ಕೇಳಿದಾಗ ದುರ್ಯೋಧನ ಐದು ಗ್ರಾಮಗಳನ್ನು ಕೊಡಲು ಒಪ್ಪುವುದಿಲ್ಲ. ಘೋರ ಯುದ್ಧ ಪ್ರಾರಂಭವಾಗುತ್ತದೆ. ಕ್ಷಾತ್ರಧರ್ಮಕ್ಕನುಗುಣವಾಗಿ ಪಾಂಡವರು ಕೌರವರೊಂದಿಗೆ ಯುದ್ಧಮಾಡಿ ದುರ್ಯೋಧನನ್ನು ಅವನ ಪರಿವಾರದೊಂದಿಗೆ ನಿರ್ಮೂಲನ ಮಾಡಿ ಸರ್ವಸಂಪತ್ಸಮೃದ್ಧವಾದ ಭಾರತ ಸಾಮ್ರಾಜ್ಯವನ್ನು ಪಡೆಯುತ್ತಾರೆ. ಹೀಗೆ ಪಾಂಡವ–ಕೌರವರಲ್ಲಿ ಉಂಟಾದ ಭೇದವು ಕೌರವರ ಸರ್ವವಿನಾಶಕ್ಕೂ ಪಾಂಡವರ ವಿಜಯಕ್ಕೂ ಕಾರಣವಾಯಿತು. ಈ ಕಥಾ ಹಂದರದಲ್ಲಿ ನಡೆದುಬರುವ ಅನೇಕ ಉಪಾಖ್ಯಾನಗಳು ನೀತಿ ಕಥೆಗಳು, ಧರ್ಮೋಪದೇಶಗಳು ವರ್ಣನೆಗಳು ಇದನ್ನು ವಿಸ್ತಾರವಾಗಿಸಿವೆ. ಒಂದೊಂದು ಉಪಾಖ್ಯಾನವೂ ಒಂದೊಂದು ಸ್ವತಂತ್ರ ಕಾವ್ಯದಂತಿದ್ದು ಕಾವ್ಯಮಂಜರಿಯಿದು ಎನ್ನಬಹುದು.

ಋಷಿಮಹರ್ಷಿಗಳ ಅದ್ಭುತ ಪವಾಡ ಶಾಪ ಪ್ರಭಾವ, ತಪೋಮಹಿಮೆಗಳ ಕಥೆಗಳು, ಶಿವ, ವಿಷ್ಣು ಮುಂತಾದ ದೇವತೆಗಳ ಕಥೆಗಳು ಕೃಷ್ಣನ ಅವತಾರದ ಪ್ರಾಮುಖ್ಯತೆ ಪಶು–ಪಕ್ಷಿಗಳ ಉಪಕಥೆಗಳು, ರಾಕ್ಷಸರ ಕಥೆ, ವೀರರ ಕಥೆ, ಪತಿವ್ರತೆ, ತಪಸ್ವಿ, ತ್ಯಾಗಿಗಳ ಕಥೆ. ಹೀಗೆ ಎಲ್ಲವೂ ಇಡಿಕಿರಿದಿವೆ. "ನಿಜವಾಗಿಯೂ ಮಹಾಭಾರತ ಒಂದು ಸಾಹಿತ್ಯಭೂತ" ಎಂಬ ವಿಂಟರ್ ನಿಟ್ಸ್ ಅಭಿಪ್ರಾಯ ಗಮನಾರ್ಹವಾದದು.

ದುಷ್ಯಂತ – ಭರತ, ಯಯಾತಿ–ಪುರು, ನಳ–ದಮಯಂತಿ, ಸಾವಿತ್ರಿಯ ಕಥೆ, ರಾಮನ ಕಥೆ ಹೀಗೆ ಒಂದೊಂದು ಸುಮನೋಹರವಾಗಿದೆ. ಕ್ಷೇಮೇಂದ್ರನು 'ಪೀಯೂಷರಸಸಾರ'ವೆಂದು ಕರೆದಿರುವುದು ಸಾರ್ಥಕವಾಗಿದೆ.

ಮಹಾಭಾರತವು ಯುದ್ಧದ ಕಥೆಯಾಗಿರುವುದರಿಂದ ವೀರರಸ ತುಂಬಿದೆ ಎಂದುಕೊಂಡರೂ ಇದರ ಹಿಂದಿರುವುದು ಪಾಂಡವರ ಕಷ್ಟ–ಕಾರ್ಪಣ್ಯ ಕೊನೆಗೆ ಕೌರವ–ಪಾಂಡವರ ವಂಶಗಳ ನಿರ್ಮೂಲನ, ಸಾವಿರಾರು ರಾಜರ ಸಾವು ೧೮ ಅಕ್ಷೋಹಿಣಿ ಸೈನ್ಯದ ಅಳಿವು. ಇದು "ಉಲ್ಲಾಸದಿಂದ ಮನಸ್ಸನ್ನು ಉಬ್ಬಿಸುವ ಅಥವಾ ಕುಣಿಸುವ ಗ್ರಂಥದಲ್ಲಿ ಇದರ ಹಿನ್ನೆಲೆ ದುಃಖ"

ಮಹಾಭಾರತಕ್ಕೆ ಭಾರತೀಯ ಪರಂಪರೆಯಲ್ಲಿ ತನ್ನದೇ ಆದ ಸ್ಥಾನವಿದೆ. ಈ ಕಾವ್ಯದ ಸರಳ ವ್ಯಾಖ್ಯಾನಕ್ಕೆ ನಿಲುಕುವಂಥದ್ದಲ್ಲ. ಇತಿಹಾಸ ಕಾವ್ಯ ಧರ್ಮಾಧರ್ಮ–

ಗಳನ್ನು ನಿರ್ಣಯಿಸುವ ಕಾವ್ಯ, ಹುಟ್ಟು–ಸಾವಿನ ನಡುವಿನ ಪಯಣದ ಹಾದಿಯನ್ನು ನಿರ್ದೇಶಿಸುವ, ಮುಂದಿನ ಗುರಿತೋರುವ ಆಧ್ಯಾತ್ಮಿಕ ಕಾವ್ಯವೆಂದು ಬಗೆಬಗೆಯಲ್ಲಿ ಅರ್ಥೈಸಿಕೊಳ್ಳಲಾಗಿದೆ. ಕನ್ನಡದ ಪ್ರಸಿದ್ಧ ರಚನೆಗಳಲ್ಲಿ ಪಂಪ, ರನ್ನ, ಕುಮಾರವ್ಯಾಸರು ಹಳಗನ್ನಡ ಮತ್ತು ನಡುಗನ್ನಡ ಹಾದಿಯಲ್ಲಿ ತೋರುತ್ತಾರೆ. ಆಧುನಿಕ ಕಾಲದಲ್ಲಿ ಶ್ರೀ ಎ.ಆರ್.ಕೃಷ್ಣಶಾಸ್ತ್ರೀಗಳು ಮಹಾಭಾರತ ಮುಖ್ಯ ಕಥೆಯನ್ನು ಸಾರಕೆಡದಂತೆ ಸುಲಲಿತ ಸಂಗ್ರಹದೊಂದಿಗೆ 'ವಚನ ಭಾರತ'ವಾಗಿ ತಂದುಕೊಟ್ಟಿದ್ದಾರೆ.

ಭರತವಂಶದ ಪ್ರಸಿದ್ಧ ದೊರೆ ·ಶಂತನುವಿನಿಂದ ಪಾಂಡವ–ಕೌರವರ ಕಥೆ ಮೊದಲಾಗುತ್ತದೆ. ಗಂಗೆಯ ಅಪೂರ್ವ ಸೌಂದರ್ಯಕ್ಕೆ ಸೋತ ಶಂತನು "ನಾನು ಮಾಡುವ ಯಾವುದೇ ಒಳ್ಳೆಯ ಇಲ್ಲವೆ ಕೆಟ್ಟ ಕೆಲಸವನ್ನು ಆಕ್ಷೇಪಿಸಬಾರದು ಹಾಗೇ ಆಕ್ಷೇಪಿಸಿದ್ದೇ ಆದ್ದಲ್ಲಿ ನಿನ್ನನ್ನು ನಾನು ಬಿಟ್ಟು ಹೊರಟು ಹೋಗುತ್ತೇನೆ" ಎಂದು ಗಂಗೆ ವಿಧಿಸಿದ ಷರತ್ತನ್ನು ಒಪ್ಪಿ ಮದುವೆಯಾದನು. ಗಂಗೆಯು ತನ್ನ ಏಳುಜನ ಮಕ್ಕಳನ್ನು ಹುಟ್ಟಿದ ಹಾಗೆ ಗಂಗೆಯಲ್ಲಿ ತೇಲಿಬಿಡುತ್ತಿದ್ದಳು. ಇದನ್ನು ಗಮನಿಸುತ್ತಿದ್ದ ಶಂತನು ಎಲ್ಲಿ ತನ್ನನ್ನು ಬಿಟ್ಟು ಹೋಗುವಳೋ ಎಂದು ಹೆದರಿ ಏನನ್ನು ಕೇಳದೇ ಸುಮ್ಮನಿರುತ್ತಿದ್ದನು. ಗಂಗೆಯು ತನ್ನ ಎಂಟನೆಯ ಮಗುವನ್ನು ಗಂಗೆಗೆ ಹಾಕಲು ಮುಂದಾದಾಗ ಶಂತನುವಿಗೆ ದುಃಖ ಉಕ್ಕಿಬಂದು, ಮಗುವಿನ ಮೇಲೆ ಆಸೆಯಾಗಿ "ತಡೆ, ಪುತ್ರಘಾತಿನಿ! ಅದನ್ನು ಕೊಲ್ಲಬೇಡ! ನೀನು ಯಾರು? ಯಾರ ಮಗಳು? ಏಕೆ ಹೀಗೆ ಮಕ್ಕಳನ್ನು ಕೊಂದು ಕೊಂದು ಮಹಾಪಾಪ ಕಟ್ಟಿಕೊಳ್ಳುತ್ತೀಯಾ?" ಎಂದು ಕೇಳುತ್ತಾನೆ. ಅದಕ್ಕೆ ಗಂಗೆ ನಾನು ಜಾಹ್ನವಿಯ ಮಗಳು ಗಂಗೆ ಎಂದು, ಈ ಮಕ್ಕಳು ಅಷ್ಟವಸುಗಳು; ವಸಿಷ್ಠರಶಾಪದಿಂದ ಮನುಷ್ಯ ಜನ್ಮವನ್ನು ಪಡೆದಿದ್ದರು. ನಾನು ಅವರಿಗೆ ಮಾತು ಕೊಟ್ಟಿದಂತೆ ಹುಟ್ಟು ಹುಟ್ಟುತ್ತಿದ್ದ ಹಾಗೆ ಅವರನ್ನು ಆ ಮನುಷ್ಯ ಜನ್ಮದಿಂದ ಬಿಡುಗಡೆ ಮಾಡಿದೆ". ನಮ್ಮ ಕಟ್ಟುಪಾಡಿನಂತೆ ನಿನ್ನೊಡನೆಯ ನನ್ನ ಜೀವನ ಇಂದಿಗೆ ಮುಗಿಯಿತು. ಮಹಾವ್ರತನಾದ ಈ ಮಗನನ್ನು ಕಾಪಾಡಿಕೋ ಎಂದು ಹೇಳಿ ಹೊರಟು ಹೋದನು ಆ ಮಗವೇ ಭೀಷ್ಮ

ಶಂತನು ಒಮ್ಮೆ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಬೆಸ್ತರ ಹುಡುಗಿ ಸತ್ಯವತಿಯನ್ನು ಆಸೆಪಟ್ಟು, ಅವಳ ತಂದೆ ದಾಶರಾಜನನ್ನು ಕೇಳುತ್ತಾನೆ. ಅದಕ್ಕೆ ದಾಶರಾಜನು "ಮಹಾರಾಜ! ನಿನಗೆ ಇವಳ ಹೊಟ್ಟೆಯಲ್ಲಿ ಹುಟ್ಟುವ ಮಗುವೇ ನಿನ್ನ ಕಾಲಾಂತರ ರಾಜನಾಗಬೇಕು" ಎಂದು ಕೋರಿಕೆಯನಿಡುತ್ತಾನೆ. ಈಗಾಗಲೇ ಒಬ್ಬ ಮಗನಿದ್ದ ಕಾರಣ ಶಂತನು ದಾಶರಾಜನ ಮಾತಿಗೆ ಒಪ್ಪಿಗೆ ಕೊಡುವುದಿಲ್ಲ. ತಂದೆಯ ಮನದಾಸೆಯನ್ನು ತಿಳಿದುಕೊಂಡ ಭೀಷ್ಮನು ದಾಶರಾಜನ ಬಳಿಗೆ ಹೋಗಿ 'ತನ್ನ ತಂದೆಯ ಅನಂತರ ನಿನ್ನ ಮಕ್ಕಳೇ ಉತ್ತರಾಧಿಕಾರಿಯಾಗುವರೆಂದು, ನಾನು

ಬ್ರಹ್ಮಚಾರಿಯಾಗಿಯೇ ಉಳಿಯುವುದಾಗಿ ಮಾತುಕೊಟ್ಟು ಸತ್ಯವತಿಯನ್ನು ಕರೆತಂದು ತಂದೆಗೆ ಮದುವೆ ಮಾಡಿದನು. ಇದರಿಂದ ಸಂತೋಷಗೊಂಡ ಶಂತನು "ನೀನಾಗಿ ಸಾವನ್ನು ಅಪೇಕ್ಷಿಸುವವರೆಗೂ ನಿನಗೆ ಸಾವು ಬಾರದಿರಲಿ" ಎಂದು ಭೀಷ್ಮನಿಗೆ ವರ ನೀಡಿದನು.

ಶಂತನು ಮತ್ತು ಸತ್ಯವತಿಯರಿಗೆ ಚಿತ್ರಾಂಗದ ಮತ್ತು ವಿಚಿತ್ರವೀರ್ಯ ಎಂಬ ಇಬ್ಬರು ಮಕ್ಕಳಾದರು. ಮಕ್ಕಳು ಚಿಕ್ಕವರಾಗಿದ್ದಾಗಲೇ ಶಂತನು ಮರಣಹೊಂದಿದನು. ಭೀಷ್ಮನು ತಾನು ಕೊಟ್ಟ ಮಾತಿನಂತೆ. ಚಿತ್ರಾಂಗದನಿಗೆ ಪಟ್ಟಾಭಿಷೇಕ ಮಾಡಿ ಸತ್ಯವತಿಗೆ ವಿಧೇಯನಾಗಿ ನಡೆದುಕೊಳ್ಳುತ್ತಿದ್ದನು. ಚಿತ್ರಾಂಗದ ಗಂಧರ್ವರೊಡನೆ ಹೋರಾಡುವಾಗ ಮರಣ ಹೊಂದಿದನು. ಅನಂತರ ವಿಚಿತ್ರವೀರ್ಯನಿಗೆ ಪಟ್ಟಕಟ್ಟಿ ಧರ್ಮದ ರಾಜ್ಯಪರಿಪಾಲನೆ ಮಾಡಿಕೊಂಡು ಭೀಷ್ಮನು ಬರುತ್ತಿದ್ದನು. ವಿಚಿತ್ರವೀರ್ಯನು ಭೀಷ್ಮನಿಗೆ ವಿಧೇಯನಾಗಿದ್ದನು.

ವಿಚಿತ್ರವೀರ್ಯನು ಯೌವನಕ್ಕೆ ಬರಲು, ಕಾಶೀರಾಜನು ತನ್ನ ಮೂರುಜನ ಹೆಣ್ಣುಮಕ್ಕಳಿಗೆ ಸ್ವಯಂವರ ಏರ್ಪಡಿಸುತ್ತಿರುವ ವಿಷಯ ತಿಳಿದು ಅಲ್ಲಿಗೆ ತೆರಳಿ ತನ್ನ ತೋಳ್ಬಲದ ಮೂಲಕ ಅಲ್ಲಿದ್ದ ರಾಜರನ್ನೆಲ್ಲ ಎದುರಿಸಿ ಆ ಮೂರು ಜನ ಹೆಣ್ಣುಮಕ್ಕಳನ್ನು ಅರಮನೆಗೆ ಕರೆತಂದನು. ಅವರೇ ಅಂಬೆ, ಅಂಬಿಕೆ, ಅಂಬಾಲಿಕೆಯರು ಇವರಲ್ಲಿ ಅಂಬೆ ತಾನು ಶಾಲ್ಯ ರಾಜನನ್ನು ಮನಸ್ಸಿನಲ್ಲಿಯೇ ಪತಿಯಾಗಿ ವರಿಸಿದ್ದೆನೆಂದು ಹೇಳಿದಾಗ ಭೀಷ್ಮನು ಅವಳನ್ನು ಶಾಲ್ಯನ ಬಳಿಗೆ ಕಳುಹಿಸಿದನು. ಇನ್ನುಳಿದ ಅಂಬಿಕೆ, ಅಂಬಾಲಿಕೆಯರನ್ನು ವಿಚಿತ್ರವೀರ್ಯನಿಗೆ ಮದುವೆಮಾಡಿದನು. ಧರ್ಮಾತ್ಮನಾಗಿದ್ದ ವಿಚಿತ್ರವೀರ್ಯನು ಕಾಮಾತ್ಮನಾಗಿ ಪರಿಣಮಿಸಿದನು. ಚಿಕ್ಕ ವಯಸ್ಸಿನಲ್ಲಿಯೇ ಕ್ಷಯರೋಗ ಬಂದು ಮಡಿದನು.

ವಿಚಿತ್ರವೀರ್ಯನಿಗೆ ಮಕ್ಕಳಿಲ್ಲದ ಕಾರಣ ರಾಜ್ಯಕ್ಕೆ ದಿಕ್ಕೆ ಇಲ್ಲದ್ದಾಯಿತು. ಇದರಿಂದ ಒಂದು ನಿರ್ಧಾರಕ್ಕೆ ಬಂದ ಸತ್ಯವತಿ ಭೀಷ್ಮನಿಗೆ "ನನ್ನ ಮಗನೂ ನಿನ್ನ ಪ್ರೀತಿಯ ತಮ್ಮನೂ ಆಗಿದ್ದ ವಿಚಿತ್ರವೀರ್ಯನು ಸಂತಾನವಿಲ್ಲದೆ ಸ್ವರ್ಗಸ್ಥನಾಗಿ ಬಿಟ್ಟ; ಕಾಶಿರಾಜಪುತ್ರಿಯರಾದ ಅವನ ರಾಣಿಯರು ರೂಪಯೌವನಸಂಪನ್ನೆಯರು; ಮಕ್ಕಳಾಗಬೇಕೆಂದು ಅವರಿಗೆ ಆಸೆ. ಆದ್ದರಿಂದ ನೀನು ಅವರಲ್ಲಿ ಮಕ್ಕಳನ್ನು ಪಡೆದು ನಮ್ಮ ಮನೆಯನ್ನು ಉಳಿಸಿಕೊಂಡು ಬರಬೇಕಾಗಿದೆ. ಇದು ನಿನಗೆ ಧರ್ಮ; ನನ್ನ ಅಭಿಲಾಷೆ; ಹಾಗೆಯೇ ರಾಜ್ಯದಲ್ಲಿ ಅಭಿಷಿಕ್ತನಾಗಿ ಪ್ರಜಾಪಾಲನೆ ಮಾಡು, ಸಂಸಾರ ನಡೆಸು; ನಿನ್ನ ಪಿತೃಗಳನ್ನು ಮುಳುಗಿಸಬೇಡ!" ಎಂದಳು. ಇದಕ್ಕೆ ಭೀಷ್ಮನು "ತ್ರಿಲೋಕಾಧಿಪತ್ಯ ಬಂದರೂ ಬಿಟ್ಟೇನು, ಅದಕ್ಕಿಂತ ಹೆಚ್ಚಿನದಿನ್ನೇನಾದರೂ ಇದ್ದರೆ ಬಿಟ್ಟೇನು, ಸತ್ಯವನ್ನು ಬಿಡಲಾರೆ!" ಎಂದನು. ಬೇಕಾದರೆ ಗುಣವಂತನಾದ ಒಬ್ಬ

ಬ್ರಾಹ್ಮಣನನ್ನು ಕರೆದು ಅವನಿಗೆ ಹಣಕೊಟ್ಟು ವಿಚಿತ್ರವೀರ್ಯ ಹೆಂಡತಿಯರಲ್ಲಿ ಮಕ್ಕಳನ್ನು ಪಡೆಯುವಂತೆ ಏರ್ಪಡಿಸೆಂದು ಸಲಹೆಯನ್ನು ಕೊಟ್ಟನು. ಭೀಷ್ಮನು ಕೊಟ್ಟ ಸಲಹೆಯನ್ನು ಕೇಳಿದ ಸತ್ಯವತಿಯು ಹೀಗೆನ್ನುತ್ತಾಳೆ. 'ನನಗೆ ವಿವಾಹಪೂರ್ವದಲ್ಲಿ ಪರಾಶರ ಋಷಿಯ ಸ್ನೇಹದಿಂದ ಕೃಷ್ಣದ್ವೈಪಾಯನ ವ್ಯಾಸನೆಂಬ ಮಗ ಜನಿಸಿದ್ದಾನೆ. ಅವನು ವೇದಗಳನ್ನು ವಿಂಗಡಿಸಿದವನು. ಅವನು ಸತ್ಯವಂತ, ಶಾಂತ, ತಪಸ್ವಿ, ಪಾಪರಹಿತ' ನೀನು ಒಪ್ಪುವುದಾದರೆ ಅವನನ್ನು ಕೇಳಬಹುದು ಎಂದಳು. ಇದಕ್ಕೆ ಭೀಷ್ಮನು ತನ್ನ ಸಮ್ಮತಿಯನ್ನು ಸೂಚಿಸಿದನು.

ಕೃಷ್ಣದ್ವೈಪಾಯನ ವ್ಯಾಸನು ಕೆಂಜೆಡೆ, ಹೊಳೆಯುವ ಕಣ್ಣು, ಕಂದುಬಣ್ಣದ ಗಡ್ಡಮೀಸೆಗಳನ್ನು ಹೊಂದಿದ್ದು ವಾಸನೆಯೂ, ಅಸಹ್ಯವಾಗಿಯೂ ಇದ್ದನು. ಇವನನ್ನು ಅಂಬಿಕೆ ಕಂಡ ಕೂಡಲೆ ಕಣ್ಣುಮುಚ್ಚಿಕೊಂಡಳು, ಅಂಬಾಲಿಕೆ ಬೆಚ್ಚುಬಿದ್ದು ಕಳವಳದಿಂದ ಮುಖ ಬಿಳುಪೇರಿಬಿಟ್ಟಿತು. ಕಾಲಕ್ರಮದಲ್ಲಿ ಅಂಬಿಕೆಯಲ್ಲಿ ಒಬ್ಬ ಕುರುಡ ಮಗನು, ಅಂಬಾಲಿಕೆಯಲ್ಲಿ ಬಿಳಿತುಕೊಂಡಿರುವ ಮಗುವು ಹುಟ್ಟಿತು. ಅರಮನೆಯ ದಾಸಿ ವ್ಯಾಸನನ್ನು ಭಯಭಕ್ತಿಯಿಂದ ಸೇವಿಸಿದ್ದರಿಂದ ಅವಳಲ್ಲಿ ಒಂದು ಗಂಡುಮಗು-ವಾಯಿತು. ಅವರೆ ಧೃತರಾಷ್ಟ್ರ, ಪಾಂಡು ಮತ್ತು ವಿಧುರ. ಭೀಷ್ಮನು ಆ ಮಕ್ಕಳನ್ನು ತನ್ನ ರಕ್ಷಣೆಗೆ ತೆಗೆದುಕೊಂಡು ಅವರಿಗೆ ಕಾಲಕಾಲಕ್ಕೆ ಆಗಬೇಕಾದ ಸಂಸ್ಕಾರಗಳನ್ನು ಮಾಡಿಸಿ ವ್ಯಾಯಾಮ ಬಿಲ್ಲು, ಕುದುರೆ ಸವಾರಿ, ಇತಿಹಾಸ, ಪುರಾಣ, ನೀತಿಶಾಸ್ತ್ರ, ವೇದವೇದಾಂಗ ಇವುಗಳನ್ನೆಲ್ಲಾ ಕಲಿಸಿದನು. ಪಾಂಡುವು ಧನುರ್ವಿದ್ಯೆಯಲ್ಲಿ ತುಂಬ ಗಟ್ಟಿಗನೆನ್ನಿಸಿಕೊಂಡನು. ಧೃತರಾಷ್ಟ್ರನು ಅತ್ಯಂತ ಬಲಶಾಲಿ ಎನ್ನಿಸಿಕೊಂಡನು. ವಿಧುರನು ಪರಮಧಾರ್ಮಿಕನೆನ್ನಿಸಿಕೊಂಡನು. ಹೀಗೆ ನಷ್ಟವಾಗಿದ್ದ ಶಂತನುವಿನ ವಂಶವು ಕುಡಿವಡೆದು ಮುಂದಕ್ಕೆ ಬಂತು. ಧೃತರಾಷ್ಟ್ರನು ಕುರುಡನಾದ್ದರಿಂದ ಪಾಂಡುವೇ ದೊರೆಯಾದನು.

ಸಕಾಲದಲ್ಲಿ ಭೀಷ್ಮನು, ಧೃತರಾಷ್ಟ್ರನಿಗೆ ಸುಬಲರಾಜನ ಮಗಳಾದ ಗಾಂಧಾರಿಯನ್ನು ತಂದು ಮದುವೆ ಮಾಡಿದನು. ಪಾಂಡುವಿಗೆ ಶೂರರಾಜನ ಮಗಳು ವಸುದೇವನ ತಂಗಿ; ಕುಂತಿಭೋಜನ ಸಾಕುಮಗಳು ಆದ ಪೃಥೆಯನ್ನು ಮದುವೆ ಮಾಡಿದನು. ಅಲ್ಲದೆ ತುಂಬ ರೂಪವತಿ ಎಂದು ಪ್ರಸಿದ್ಧಿಹೊಂದಿದ್ದ ಮಾದ್ರಿಯನ್ನು ಯಥೇಚ್ಛವಾದ ಹಣಕೊಟ್ಟು ಭೀಷ್ಮನು ಕೊಂಡು ತಂದು ಪಾಂಡುವಿಗೆ ಮದುವೆ ಮಾಡಿದನು.

ಒಂದು ದಿನ ಪಾಂಡುವು ತನ್ನ ಹೆಂಡತಿಯರೊಡನೆ ಕಾಡಿಗೆ ಹೋಗಿದ್ದು ಅಲ್ಲಿ ಒಂದು ಗಂಡು ಜಿಂಕೆಯೂ ಒಂದು ಹೆಣ್ಣು ಜಿಂಕೆಯೂ ಕೂಡಿಕೊಂಡಿದ್ದದನ್ನು ನೋಡಿ ಅವುಗಳನ್ನು ಐದು ಬಾಣಗಳಿಂದ ಹೊಡೆದು ಕೆಡವಿದನು. ಗಂಡು ವಿಲವಿಲನೆ ನೆಲದ

ಮೇಲೆ ಒದ್ದಾಡುತ್ತಾ ಮನುಷ್ಯರಂತೆ ಮಾತನಾಡುತ್ತಾ 'ಎಲೈ ರಾಜನೇ, ಧರ್ಮಾತ್ಮರಾದವರ ವಂಶದಲ್ಲಿ ಹುಟ್ಟಿಯೂ ಏಕೆ ಕಾಮಲೋಭಗಳಿಗೆ ವಶನಾಗಿ ನಿನ್ನ ಬುದ್ಧಿ ಕೆಟ್ಟು ಹೋಯಿತು? ವಿಧಿಯು ಬುದ್ಧಿಯನ್ನು ತಪ್ಪಿಸಿಬಿಡುತ್ತೆ ಬುದ್ಧಿಯು ವಿಧಿಯನ್ನು ತಪ್ಪಿಸಲಾರದು. ಕಾಡಿನಲ್ಲಿ ಹೆಣ್ಣಿನೊಡನೆ ಕೂಡಿದ್ದ ಮೃಗಗಳನ್ನು ಹೀಗೆ ಯಾರು ಹೊಡೆದಾರು? ಗೆಡ್ಡೆ ಗೆಣಸುಗಳನ್ನು ತಿಂದುಕೊಂಡು ಅರಣ್ಯದಲ್ಲಿ ಸಂಚರಿಸುತ್ತಿದ್ದ ನಾನು ನಿನಗೆ ಏನು ಅಪರಾಧ ಮಾಡಿದೆ? ರತ್ಯಾಸಕ್ತರಾಗಿದ್ದ ನಮ್ಮನ್ನು ಹೀಗೆ ಕ್ರೂರವಾಗಿ ಕೊಂದಿದ್ದರಿಂದ ನಿನ್ನ ಜೀವಿತವೂ ಹೀಗೆಯೇ ದುಃಖದಿಂದ ಕೊನೆಗಾಣುತ್ತದೆ' ಎಂದು ಪ್ರಾಣಬಿಟ್ಟಿತು. ಅದನ್ನು ನೋಡಿ ರಾಜನಿಗೆ ತನ್ನ ಬಂಧುವನ್ನು ಕಳೆದುಕೊಂಡಂತೆ ತುಂಬ ದುಃಖವಾಯಿತು. 'ನನ್ನ ಮನಸ್ಸು ಅಧಮವಾಗಿ ವ್ಯಸನದಲ್ಲಿ ಸಿಕ್ಕಿಕೊಂಡಿತು. ವ್ಯಸನವೆನ್ನುವುದು ದೊಡ್ಡ ಬಂಧನ. ಆದ್ದರಿಂದ ಇದನ್ನು ಬಿಟ್ಟು ಸಂನ್ಯಾಸಕೈಗೊಂಡು ಮೋಕ್ಷಪಡೆಯಲು ಯತ್ನಿಸುತ್ತೇನೆ..... ಮುನಿವೃತ್ತಿಯನ್ನು ಕೈಗೊಂಡು ಭಿಕ್ಷೆಯಿಂದ ಜೀವಿಸುತ್ತ ಘೋರವಾದ ತಪಸ್ಸು ಮಾಡುತ್ತೇನೆ. ಮತ್ತೊಬ್ಬರ ಅಧೀನದಲ್ಲಿರದೆ ಗಾಳಿಯಂತೆ ಸ್ವತಂತ್ರನಾಗಿರುತ್ತೇನೆ. ಇಂದ್ರೀಯಗಳನ್ನು ಗೆದ್ದು ಪಾಪಗಳನ್ನು ಕಳೆದುಕೊಳ್ಳುತ್ತೇನೆ'. ಹೀಗೆಂದುಕೊಂಡು ಹೆಂಡತಿಯರನ್ನು, ಕರೆದು ಅವರಿಗೆ ತನ್ನ ನಿಶ್ಚಯವನ್ನು ತಿಳಿಸಿದನು. ಅವರು 'ಮಹಾರಾಜ' ಧರ್ಮಪತ್ನಿಯರೊಡನೆ ಇದ್ದುಕೊಂಡೂ ತಪ್ಪಸ್ಸು ಮಾಡಬಹುದು. ನಾವು ಸ್ವರ್ಗಪಡೆಯಬೇಕಾದರೂ ನಿನ್ನಿಂದ ತಾನೆ! ನಾವೂ ಇಂದ್ರಿಯ ನಿಗ್ರಹ ಮಾಡಿಕೊಂಡು ನೀನಿರುವ ಕಡೆಯೇ ತಪಸ್ಸು ಮಾಡುತ್ತೇವೆ. ಹಾಗಲ್ಲದೆ ನಮ್ಮನ್ನು ಬಿಟ್ಟು ನೀನು ಹೊರಟು ಹೋಗುವೆಯಾದರೆ ನಾವು ಇಂದೇ ಪ್ರಾಣ ಕಳೆದುಕೊಳ್ಳುತ್ತೇವೆ. ಇದು ಖಂಡಿತ' ಎನ್ನುತ್ತಾರೆ. ಧರ್ಮಬಿಡದೆ ಸತಿಯರೂ ಅವನನ್ನು ಹಿಂಬಾಲಿಸುವುದು. ಹೀಗೆ ಅಲೌಕಿಕತೆಯ ವೃತ್ತದಲ್ಲಿ ಕತೆ ಸರಳವಾಗಿ ಮುಂದುವರೆಯುತ್ತಾ ಹೋಗುತ್ತದೆ.

ತನ್ನ ಪತ್ನಿಯರೊಂದಿಗೆ ತಪಸ್ಸಿಗೆ ಹೊರಟ ಪಾಂಡವು 'ಹಿಮಾಲಯ ಪರ್ವತದಿಂದ ಮುಂದಕ್ಕೆ ಹೋಗಿ ಇಂದ್ರದ್ಯುಮ್ನ ಸರಸ್ಸು ಹಂಸಕೂಟವನ್ನು ದಾಟಿ ಶತಶೃಂಗದಲ್ಲಿ ತಾಪಸನಾಗಿ ನಿಂತನು. ಅಲ್ಲಿ ಕೆಲವು ಕಾಲ ತಪಸ್ಸು ಮಾಡಿ ಸ್ವರ್ಗಕ್ಕೆ ಹೋಗಬೇಕೆಂದು ಹೆಂಡತಿಯರನ್ನು ಕರೆದುಕೊಂಡು ಉತ್ತರಾಭಿಮುಖವಾಗಿ ಹೊರಡಲು ಅಲ್ಲಿದ್ದ ತಾಪಸರು, 'ಮುಂದೆ ಹೋಗುತ್ತಾ ಹೋಗುತ್ತಾ ದಾರಿಯಲ್ಲಿ ನಾನಾ ಗಿರಿದುರ್ಗಗಳೂ ದೇವಗಂಧರ್ವಾಪ್ಸರೆಯರ ಕ್ರೀಡಾಭೂಮಿಗಳೂ ಕುಬೇರನ ಉದ್ಯಾನವೂ ನದೀ ಪ್ರದೇಶಗಳೂ ಗಿರಿಕಂದರಗಳೂ ಸಿಕ್ಕುತ್ತವೆ. ಇನ್ನೂ ಮುಂದೆ ಸದಾ ಹಿಮ ಮುಚ್ಚಿಕೊಂಡು ಗಿಡ ಮೃಗ ಪಕ್ಷಿಗಳೊಂದೂ ಇಲ್ಲದೆ ಹೋಗುವುದಕ್ಕೆ

ಅಸಾಧ್ಯವಾದಂಥ ಪ್ರದೇಶಗಳು ಕಂಡುಬರುತ್ತವೆ. ಅಲ್ಲಿ ಗಾಳಿಯೊಂದು ಬೀಸುತ್ತಿರುತ್ತದೆ. ಕೆಲವು ಸಿದ್ಧರೂ ಮಹರ್ಷಿಗಳೂ ಮಾತ್ರ ಇರುತ್ತಾರೆ.

ಅಂಥ ಕಡೆಗೆ ಈ ಹೆಂಗಸರನ್ನು ಕರೆದುಕೊಂಡು ಹೇಗೆ ಹೋಗುತ್ತೀಯ? ಎಂದು ಕೇಳಿದರು. ಅವನು ಇನ್ನೇನು ಮಾಡುವುದು? ನನಗೆ ಮಕ್ಕಳಿಲ್ಲ. ಮಕ್ಕಳಿಲ್ಲದವನಿಗೆ ಸ್ವರ್ಗವೂ ಇಲ್ಲ. ನಾನು ನಮ್ಮ ತಂದೆಯ ಕ್ಷೇತ್ರದಲ್ಲಿ ಹುಟ್ಟದನಂತೆ. ಇಲ್ಲಿ ನನ್ನ ಕ್ಷೇತ್ರದಲ್ಲಿ ಮಕ್ಕಳು ಹುಟ್ಟುವುದು ಹೇಗೆ? ಎಂದು ಕೇಳುತ್ತಾನೆ. ಅದಕ್ಕೆ 'ಅಯ್ಯಾ! ಅದು ಸಾಧ್ಯ ಅದೃಷ್ಟವು ಫಲಕೊಡಬೇಕಾದರೆ ದೃಷ್ಟವಾಗಿ ಕರ್ಮ ಮಾಡಬೇಕು. ಹಾಗೆ ಮಾಡಿದೆಯಾದರೆ ನಿನಗೆ ಗುಣಸಂಪನ್ನರಾದ ಮಕ್ಕಳಾಗಿ ನೀನು ಸಂತೋಷಪಡೆಯುವೆ' ಎಂದು ಹೇಳುತ್ತಾರೆ.

ಹೀಗೆ ಪಾಂಡವು ತಪಸ್ಸಿಗೆ ಬಂದಾಗ ಆ ಋಷಿ ಮುನಿಗಳಿಂದ ಸಂತಾನದ ಸೂಚನೆಯನ್ನು ಪಡೆಯುತ್ತಾನೆ. ಮುಂದೆ ಅವನು ನಿರ್ಧರಿಸುವ ನಿಯೋಗದ ವಿಧಿಗೆ ನೆರವಾಗುತ್ತದೆ.

ಕುಂತಿಯು ಒಬ್ಬಳೇ ಇದ್ದಾಗ ಅವಳನ್ನು ಕುರಿತು ಪಾಂಡು 'ನಾವು ಬೇಕಾದ ದಾನಧರ್ಮಗಳನ್ನು ಮಾಡಿದೆವು ತಪಸ್ಸನ್ನೂ ನಿಯಮವನ್ನೂ ಆಚರಿಸಿದೆವು. ಆದರೆ ಇದು ಯಾವುದು ಸಂತಾನವಿಲ್ಲದೆ ಪಾವನವಲ್ಲ. ನನ್ನಿಂದ ಮಕ್ಕಳಾಗುವುದಿಲ್ಲ. ಆದರೆ ಮಕ್ಕಳಲ್ಲಿ ಅನೇಕ ಬಗೆಯುಂಟು. ಅವರಲ್ಲಿ ತನ್ನಿಂದ ಹುಟ್ಟಿದ ಮಗನೇ ಶ್ರೇಷ್ಠ. ಆದರೆ ಅಂಥವನಿಲ್ಲದಿರುವಾಗ ಅಪದ್ಧರ್ಮವಾಗಿ ಉತ್ತಮರಿಂದ ಸಂತಾನವನ್ನು ಪಡೆಯುವುದು. ಹೀಗೆ ಪಡೆದ ಸಂತಾನವು ಸ್ವಂತ ಮಗನಿಗಿಂತಲೂ ಶ್ರೇಷ್ಠನೆಂದೂ ಮನುವು ಹೇಳಿದ್ದಾನೆ. ನನ್ನಿಂದ ನಿನಗೆ ಮಕ್ಕಳಾಗುವುದಿಲ್ಲ. ಆದ್ದರಿಂದ ನಾನು ನಿನಗೆ ಅನುಜ್ಞೆ ಕೊಡುತ್ತೇನೆ. ಯಾವನಾದರೂ ಒಬ್ಬ ತಪಸ್ವಿಯಾದ ಬ್ರಾಹ್ಮಣನಿಂದ ಪುತ್ರನನ್ನು ಪಡೆಯುವುದಕ್ಕೆ ಯತ್ನಿಸು ಎಂದು ಹೇಳಿದನು. ಅದಕ್ಕೆ ಅವಳು ಒಪ್ಪಲಿಲ್ಲ. ಮಹಾರಾಜ ಧರ್ಮವನ್ನು ತಿಳಿದವನಾಗಿಯೂ ನೀನು ನಿನ್ನ ಧರ್ಮಪತ್ನಿಯೊಡನೆ ಹೀಗೆ ಹೇಳುವುದೇ? ನಿನ್ನಿಂದಲೇ ನನಗೆ ಧರ್ಮರೀತಿಯಿಂದ ಮಕ್ಕಳಾಗಲಿ, ನಿನ್ನೊಡನೆಯೇ ನಾನು ಸ್ವರ್ಗಕ್ಕೆ ಬರುತ್ತೇನೆ. ಮಕ್ಕಳಿಗೋಸ್ಕರವಾಗಿ ಮನಸ್ಸಿನಲ್ಲಿಯೂ ನಿನಗಿಂತಲೂ ಮತ್ತೊಬ್ಬನನ್ನು ನಾನು ಯೋಚಿಸುವುದಿಲ್ಲ. ನಿನಗಿಂತ ಉತ್ತಮನಾದವನು ಯಾವನಿದ್ದಾನೆ?.... ಎಂದು ಕುಂತಿ ಪಾಂಡುವಿಗೆ ನಿರಾಕಾರಣದ ಉತ್ತರ ಹೇಳುತ್ತಾಳೆ. ಅದಕ್ಕೆ ಪಾಂಡು "ಈಗ ನಾನು ನಿನಗೆ ಅಪ್ಪಣೆ ಮಾಡುತ್ತೇನೆ. ನಾನು ಹೇಳುವ ರೀತಿಯಲ್ಲಿ ಮಕ್ಕಳನ್ನು ಪಡೆದು ಪುತ್ರವಂತರು ಹೋಗಬಹುದಾದ ಲೋಕಕ್ಕೆ ನಾನು ಹೋಗುವಂತೆ ಮಾಡು" ಎಂದು ಹೇಳಿದನು. ಆಗ ಕುಂತಿಯು ತಾನು ಚಿಕ್ಕವಳಾಗಿದ್ದಾಗ ದುರ್ವಾಸನೆಂಬ ಬ್ರಾಹಣನ ಸೇವೆ ಮಾಡಿದ್ದು, ಮೆಚ್ಚಿದ

ಅವನು ಮಂತ್ರೋಪದೇಶ ಮಾಡಿ ದೇವತೆಗಳು ವಶವಾಗುವ ವಿಧಾನ ತಿಳಿಸಿರುವುದು ಇದನ್ನೆಲ್ಲಾ ಪಾಂಡುವಿಗೆ ನಿವೇದಿಸಿದಾಗ ಸಂತಸಗೊಂಡ ಪಾಂಡು 'ಎಲೈ ಶೋಭನೇ, ಹಾಗಾದರೆ ಧರ್ಮವನ್ನು ಬರಮಾಡು ದೇವತೆಗಳಲ್ಲೆಲ್ಲಾ ಅವನೇ ಪುಣ್ಯ ಪ್ರಭಾವವುಳ್ಳವನು. ಅವನಾದರೆ ನಮ್ಮಲ್ಲಿ ಅಧರ್ಮ ಸೇರುವುದಿಲ್ಲ. ಲೋಕವು ಇದನ್ನು ಧರ್ಮವಾಗಿ ತಿಳಿಯುತ್ತದೆ. ಅವನು ಕೊಟ್ಟ ಸಂತಾನಕ್ಕೂ ಅಧರ್ಮದಲ್ಲಿ ಮನಸ್ಸು ನಲಿಯುವುದಿಲ್ಲ' ಎಂದನು. ಅದರಂತೆ ಕುಂತಿಯು ಮಂತ್ರವನ್ನು ಜಪಿಸಿ ಧರ್ಮನನ್ನು ಬರಮಾಡಿಕೊಂಡು ಅವನ ಯೋಗಮೂರ್ತಿಯೊಡನೆ ಸೇರಿ ಯುದಿಷ್ಠಿರನನ್ನು ಪಡೆದಳು.

ಯುದಿಷ್ಠಿರನು ಹುಟ್ಟಿದ ಮೇಲೆ ಪಾಂಡುವು ಕುಂತಿಯನ್ನು ಕರೆದು 'ಈ ಮಗನೇನೋ ಧಾರ್ಮಿಕನಾದನು. ಆದರೆ ಕ್ಷತ್ರಿಯರಿಗೆ ಪ್ರಾಶಸ್ತ್ಯವಿರುವುದು ಬಲದಿಂದ. ಆದ್ದರಿಂದ ಬಲಶಾಲಿಯಾದ ಒಬ್ಬ ಮಗನನ್ನು ಪಡೆ' ಎಂದನು. ಅದರಂತೆ ಕುಂತಿ ವಾಯುವನ್ನು ಕರೆದು ಅವನಿಂದ ಮಹಾ ಪರಾಕ್ರಮಶಾಲಿಯಾದ ಭೀಮನನ್ನು ಪಡೆದಳು. ಅವನು ಹುಟ್ಟಿದ್ದಾಗ ಒಂದು ಅದ್ಭುತ ಸಂಗತಿ ನಡೆಯಿತಂತೆ. ಅದೇನೆಂದರೆ ಅವನು ತಾಯಿಯ ತೊಡೆಯ ಮೇಲಿಂದ ಕೆಳಗಿದ್ದ ಒಂದು ಬಂಡೆಯ ಮೇಲೆ ಉರುಳಲು ಮಗುವಿಗೆ ಪೆಟ್ಟಾಗುವುದಕ್ಕೆ ಬದಲು ಆ ಕಲ್ಲೇ ನೂರು ಚೂರಾಯಿತಂತೆ.

ಭೀಮನು ಹುಟ್ಟಿದ ಮೇಲೆ ಪಾಂಡುವು 'ನನಗೆ ಲೋಕೋತ್ತರನಾದ ಒಬ್ಬ ಮಗನಾಗಬೇಕು. ಅವನನ್ನು ಯಾರಿಂದ ಪಡೆಯಲಿ? ಇಂದ್ರನೇ ದೇವತೆಗಳ ರಾಜ, ಅತಿಶಯವಾದ ಬಲ ಉತ್ಸಾಹ ಕಾಂತಿಗಳನ್ನುಳ್ಳವನು. ಅವನನ್ನು ಮೆಚ್ಚಿಸಿದರೆ ಶೂರನಾದ ಮಗನನ್ನು ಪಡೆಯಬಹುದು ಎಂದು ಯೋಚಿಸಿ ತಾನೂ ಕುಂತಿಯೂ ಒಂದು ವರ್ಷ ನಿಯಮದಲ್ಲಿಟ್ಟು ಅವನನ್ನು ಪ್ರಸನ್ನನಾಗಿ ಮಾಡಿಕೊಂಡರು. ಅನಂತರ ಕುಂತಿಯು ಅವನನ್ನು ಕರೆದು ಅವನಿಂದ ಮಹಾತೇಜಶ್ಯಾಲಿಯಾದ ಅರ್ಜುನನನ್ನು ಪಡೆದಳು.

ಹೀಗೆ ಪಾಂಡುವಿನ ಅನುಜ್ಞೆಯಂತೆ ಕುಂತಿ ದೇವತೆಗಳಿಂದ ಮಕ್ಕಳನ್ನು ಪಡೆಯುತ್ತಾಳೆ. ಆದರೆ ಒಳಹರಿವಿನಲ್ಲಿ ವಾಸ್ತವದ ಸಾಧ್ಯತೆಗಳು ಕುಂತಿಯ ಮನಸ್ಸಿನ ಭಾವನೆಗಳು ಇವೆಲ್ಲಾ ವ್ಯಕ್ತವಾಗುವುದಿಲ್ಲ.

ಕುಂತಿಗೂ ಮಕ್ಕಳಾದರು ಇತ್ತ ಗಾಂಧಾರಿಗೂ ಮಕ್ಕಳಾದರು, ಅದನ್ನು ನೋಡಿ ಮಾದ್ರಿಯು ಒಂದು ದಿನ ಪಾಂಡುವನ್ನು ಕುರಿತು 'ನಾಥ, ನೀನು ಇಂಥ ಸ್ಥಿತಿಯಲ್ಲಿದ್ದೀಯಲ್ಲಾ ಎಂದಾಗಲಿ ಸವತಿಯ ಕೈಕೆಳಗಿದ್ದೇನಲ್ಲಾ ಎಂದಾಗಲಿ ನನಗೆ ಕೊರಗಿಲ್ಲ. ಗಾಂಧಾರಿಗೆ ನೂರು ಮಕ್ಕಳಾದರು. ಅದಕ್ಕೂ ನಾನು ಯೋಚಿಸುವುದಿಲ್ಲ.

ಆದರೆ ಕುಂತಿಗೆ ಮಕ್ಕಳಾಗಿ ಅವಳಿಗೆ ಸರಿಸಮಳಾದ ನನಗೆ ಮಕ್ಕಳಾಗದಿರುವುದು ತುಂಬ ಕೊರಗನ್ನುಂಟುಮಾಡಿದೆ. ಈಗ ಕುಂತಿಯು ದೊಡ್ಡ ಮನಸ್ಸು ಮಾಡಿದರೆ ನನಗೂ ಮಕ್ಕಳಾದವು, ನಿನಗೂ ಸಂತೋಷವಾಗುತ್ತದೆ. ಈ ವಿಷಯವನ್ನು ಸವತಿಯಾದ ಅವಳೊಡನೆ ನಾನೇ ಪ್ರಾರ್ಥಿಸಿಕೊಳ್ಳಲು ಬಾಯಿಬಾರದು. ನನ್ನ ಮೇಲೆ ಕರುಣವಿಟ್ಟು ನೀನು ಕೇಳುವುದಾದರೆ ಕೇಳು' ಎಂದು ಹೇಳಿದಳು. ಪಾಂಡವು ಈ ಮಾತನ್ನು ಕೇಳಿ 'ಮಾದ್ರಿ ನನಗೂ ಈ ವಿಷಯವು ಯಾವಾಗಲೂ ಮನಸ್ಸನಲ್ಲಿ ಕೊರೆಯುತ್ತಿತ್ತು. ಆದರೆ ನಿನ್ನ ಮನಸ್ಸು ಹೇಗೋ, ನಿನಗೆ ಇದು ಇಷ್ಟವಾದೀತೋ ಇಲ್ಲವೋ ಎಂದು ಸುಮ್ಮನಿದ್ದೆ. "ಈಗ ನಿನ್ನ ಮನಸ್ಸು ತಿಳಿದಂತಾಯಿತು. ಆದ್ದರಿಂದ ಪ್ರಯತ್ನಿಸುತ್ತೇನೆ. ನಾನು ಹೇಳಿದರೆ ಕುಂತಿ ಖಂಡಿತವಾಗಿಯೂ ನನ್ನ ಮಾತನ್ನು ನಡೆಸುತ್ತಾಳೆ!" ಎಂದು ಹೇಳಿ ಕುಂತಿಯ ಹತ್ತಿರ ವಿಷಯವನ್ನು ಪ್ರಸ್ತಾಪಿಸಿದನು. ಕುಂತಿಯು ಒಡಂಬಟ್ಟು ಮಾದ್ರಿಗೆ ಮಂತ್ರೋಪದೇಶ ಮಾಡಿ "ಇದನ್ನು ಒಂದು ಸಾರಿ ಮಾತ್ರ ಉಪಯೋಗಿಸಿಕೋ; ನಿನಗೆ ಅನುರೂಪನಾದ ಮಗನಾಗುತ್ತಾನೆ" ಎಂದಳು. ಮಾದ್ರಿಯು ಚೆನ್ನಾಗಿ ಯೋಚಿಸಿ ಅಶ್ವಿನೀ ದೇವತೆಗಳನ್ನು ನೆನೆದಳು. ಅವರು ಬಂದು ಅವಳಿಗೆ ದಿವ್ಯಸುಂದರವಾದ ಅವಳಿ ಮಕ್ಕಳನ್ನಿತ್ತರು. ಅವರೇ ನಕುಲ ಸಹದೇವರು.

ಪಾಂಡುವು ಮತ್ತೆ ಮಾದ್ರಿಯ ಪರವಾಗಿ ಕುಂತಿಯಲ್ಲಿ ಪ್ರಸ್ತಾಪಿಸಿದಾಗ ಅವಳು "ಮಹಾರಾಜ! ಇನ್ನು ಸಾಕು, ಸುಮ್ಮನಿರು. ಒಂದು ಮಂತ್ರದಿಂದ ಅವಳು ಎರಡು ಮಕ್ಕಳನ್ನು ಪಡೆದಳು; ನನಗೇ ಮೋಸವಾಯಿತು. ಮುಂದೆ ನನ್ನನ್ನು ಮೀರಿಸಿ ನನಗೆ ಮೇಲ್ಗೈಯಾದಾಳು! ಅವಳನ್ನು ಕಂಡರೆ ನನಗೆ ಹೆದರಿಕೆ ಹುಟ್ಟಿದೆ; ಹೆಣ್ಣು ಜನ್ಮವೇ ಹೀಗೆ! ಯಮಳ ದೇವತೆಗಳನ್ನು ಕರೆದರೆ ಅವಳ ಫಲ ಸಿಕ್ಕುವುದೆಂದು ನನಗೆ ತೋರದೆ ಹೋಯಿತು. ಆದ್ದರಿಂದ ದಯವಿಟ್ಟು ಈ ವಿಚಾರವನ್ನು ಎತ್ತಬೇಡ!" ಎಂದುಬಿಟ್ಟಳು. ಹೀಗೆ ಪಾಂಡುವಿಗೆ ದೇವತೆಗಳಿಂದ ಐದುಜನ ಮಕ್ಕಳಾದರು.

ಹೀಗಿರಲು ಒಂದು ಸಾರಿ ವಸಂತಋತು ಬಂತು. ಮುತ್ತುಗ ಮಾವು ಸಂಪಿಗೆ ಪಗಡೆ ಮುಂತಾದ ಬಗೆಬಗೆಯ ಮರಗಳು ಫಲಪುಷ್ಪಗಳಿಂದ ಶೋಭಿಸುತ್ತಿದ್ದುವು. ಕೆರೆಕಟ್ಟೆಗಳು ತಾವರೆಗಳಿಂದ ಕೂಡಿ ಬೆಳಗುತ್ತಿತ್ತು. ಒಂದು ದಿನ ಪಾಂಡುವು ಹರ್ಷಚಿತ್ತನಾಗಿ ಮಾದ್ರಿಯೊಡನೆ ಆ ಸೌಂದರ್ಯವನ್ನು ನೋಡುತ್ತಾ ತಿರುಗಾಡುತ್ತಿರಲೂ ಅವನು ಕಾಮಪರವಶನಾಗಿದ್ದದ್ದರಿಂದ ಶಾಪವನ್ನು ಲಕ್ಷ್ಯಮಾಡದೆ ಬಲಾತ್ಕಾರವಾಗಿ ಅವಳನ್ನು ಕೂಡಿಬಿಟ್ಟನು. ಪಾಂಡುವು ಪ್ರಾಣವನ್ನು ನೀಗಿದನು. ಮಾದ್ರಿ ಸಹಗಮನ ಮಾಡಿದಳು. ಕುಂತಿ ತನ್ನ ಮೂವರು ಮಕ್ಕಳೊಂದಿಗೆ ಮಾದ್ರಿಯ ಎರಡೂ ಕರೆದುಕೊಂಡು ಹಸ್ತಿನಾಪುರಕ್ಕೆ ಬಂದಳು. ಪಾಂಡವರು ಕೌರವರೊಂದಿಗೆ ಆಡುತ್ತಾ ಬೆಳೆದರಾದರೂ ಕೌರವರು ರಾಜ್ಯದಾಸೆಗೆ ಪಾಂಡವರಿಗೆ ಕಿರುಕುಳವನ್ನು

ಕೊಡುತ್ತಾ, ದ್ವೇಷಿಸುತ್ತಾ ಬಂದರು. ದ್ರೋಣಾಚಾರ್ಯರಿಂದ ಪಾಂಡವ-ಕೌರವರಿಗೆ ಸಕಲ ಶಸ್ತ್ರಾಸ್ತ್ರವಿದ್ಯೆಯನ್ನು ಭೀಷ್ಮ ಕೊಡಿಸಿದನು. ಪಾಂಡವರ ಅಭಿವೃದ್ಧಿಯನ್ನು ಸಹಿಸದ ದುರ್ಯೋಧನ ಧೃತರಾಷ್ಟ್ರನ ನೆರವಿನಿಂದ ಪಾಂಡವರನ್ನು ಮತ್ತು ಕುಂತಿಯನ್ನು ವಾರಣಾವತಕ್ಕೆ ಕಳುಹಿಸಿದನು. ಪುರೋಚನನ ನೆರವಿನಿಂದ ಅರಗಿನ ಅರಮನೆಯಲ್ಲಿ ಸಾಯಿಸಲು ಪ್ರಯತ್ನಿಸಿದನು. ಆದರೆ ಪಾಂಡವರು ಅಲ್ಲಿಂದ ತಪ್ಪಿಸಿಕೊಂಡು ಊರೂರು ತಿರುಗಿ ಬದುಕಿದರು. ಈ ಸಂದರ್ಭದಲ್ಲಿ ದ್ರೌಪದಿ ಸ್ವಯಂವರವೇರ್ಪಟ್ಟು ಅರ್ಜುನ ದ್ರೌಪದಿಯನ್ನು ಗೆದ್ದನಾದರೂ ಕುಂತಿಯಿಂದಾಗಿ ಐವರು ಮದುವೆಯಾದರು. ಪಾಂಡವರು ಬದುಕಿರುವ ವಿಷಯವನ್ನು ತಿಳಿದ ಧೃತರಾಷ್ಟ್ರ ಅವರನ್ನು ಕರೆಸಿಕೊಂಡು ಖಾಂಡವ ಪ್ರಸ್ಥಕ್ಕೆ ಕಳುಹಿಸಿದನು. ಅಲ್ಲಿ ಸುಖ, ನೆಮ್ಮದಿಯಿಂದ ನಡೆಸುತ್ತಿದ್ದ ಪಾಂಡವರು ರಾಜಸೂಯಯಾಗವನ್ನು ಮಾಡಿದರು. ಪಾಂಡವರ ವೈಭವವನ್ನು ಕಂಡು ಕರುಬಿದ ದುರ್ಯೋಧನ ಶಕುನಿಯ ನೆರವಿನಿಂದ ಜೂಜಿಗೆ ಧರ್ಮರಾಯನನ್ನು ಆಹ್ವಾನಿಸಿದನು.

**ವಸ್ತ್ರಾಪರಹರಣ ಪ್ರಸಂಗ:**

ಧೃತರಾಷ್ಟ್ರನ ಅಪ್ಪಣೆಯಂತೆ ಇಂದ್ರಪ್ರಸ್ಥಕ್ಕೆ ಬಂದ ವಿದುರನು ಸಭಾಮಂದಿರ ನೋಡಲು, ಸಂತೋಷದಿಂದ ದ್ಯೂತವಾಡಲು ದುರ್ಯೋಧನನು ಕೊಟ್ಟಿರುವ ಕರೆಯನ್ನು ತಿಳಿಸುತ್ತಾನೆ. 'ಧೃತರಾಷ್ಟ್ರನು ಅಪ್ಪಣೆಮಾಡಿರುವುದರಿಂದ ಬರದೆ ವಿಧಿಯಿಲ್ಲ, ನನಗೇನೋ ಶಕುನಿಯೊಡನೆ ಆಡುವುದಕ್ಕೆ ಇಷ್ಟವಿಲ್ಲ. ಆದರೆ ಕರೆದರೆ ಹಿಂಜರಿಯುವುದಿಲ್ಲ. ಇದು ನನ್ನ ವ್ರತ' ಎಂದು ಯುಧಿಷ್ಠಿರ ಹೊರಡಲು ನಿಶ್ಚಯಿಸುತ್ತಾನೆ.

ಅದರಂತೆ ಬಂದ ಯುಧಿಷ್ಠಿರನಿಗೆ ಶಕುನಿ ಆಟಕ್ಕಾಗಿ ಆಹ್ವಾನಿಸುತ್ತಾನೆ. ಇವನ ಕಾತುರವನ್ನು ಕಂಡು ಧರ್ಮದಿಂದ ಗೆಲ್ಲಬೇಕು, ಆರ್ಯರಾದವರು ತಪ್ಪು ಮಾತನಾಡುವುದಿಲ್ಲ. ಮಾಯ ಮೋಸ ಮಾಡುವುದಿಲ್ಲ. ನನಗೆ ಜೂಜಿನಿಂದ ಸುಖಬೇಕಿಲ್ಲ, ಸಂಪತ್ತೂ ಬೇಕಿಲ್ಲ, ಜೂಜು ನ್ಯಾಯವಾಗಿದ್ದರೂ ಅದಕ್ಕೇನು ಪೂಜ್ಯತೆ ಇಲ್ಲ ಎಂದು ಯುಧಿಷ್ಠರನು ಉತ್ತರಿಸುತ್ತಾ ಆಟಕ್ಕಾಗಿ ಕುಳಿತುಕೊಳ್ಳುತ್ತಾನೆ.

ದುರ್ಯೋಧನನು ಮುಂದೆ ಬಂದು 'ನಾನು ಪಣಕ್ಕೆ ಧನವನ್ನು, ರತ್ನವನ್ನೂ ಒದಗಿಸುತ್ತೇನೆ. ನಮ್ಮ ಶಕುನಿ ನನ್ನ ಪರವಾಗಿ ಆಡುತ್ತಾನೆ' ಎನ್ನುತ್ತಾನೆ. ಅಂತೆಯೇ ಆಟ ಶುರುವಾದಾಗ ಯುಧಿಷ್ಠಿರನು ರತ್ನಪದಕ ಸಾವಿರ ಹೊನ್ನುಗಳಿರುವ ನೂರು ಮೈಲಿಗಳು ಕುಳಿತು ಬಂದಿದ್ದ ರಥ ಅದಕ್ಕೆ ಎಂಟು ಕುದುರೆ, ಸಾವಿರ ಆನೆಗಳು, ಸಾವಿರ ದಾಸಿಯರು, ಸಾವಿರ ಸೇವಕರು, ಸಾವಿರ ರಥಗಳು, ಸಾವಿರ ಕುದುರೆಗಳು, ಸಾವಿರ ಯೋಧರು ಹೊನ್ನು ತುಂಬಿದ ಕಪ್ಪರಿಗೆ ಇವುಗಳನ್ನೆಲ್ಲಾ ಒಡ್ಡಿ ಸೋಲುತ್ತಾನೆ. ಕೊನೆಗೆ

ತಮ್ಮಂದಿರ ಮೇಲಿನ ಒಡವೆ ಇಟ್ಟು ನಕುಲ, ಸಹದೇವರನ್ನು ಕೊನೆಗೆ ಭೀಮಾರ್ಜನರನ್ನು ಪಣಕಟ್ಟಿ ಸೋಲುತ್ತಾನೆ. ತನ್ನನ್ನೂ ಒಡ್ಡಿ ಸೋತಮೇಲೆ ಶಕುನಿಯ ಪ್ರೋತ್ಸಾಹದಿಂದ ದ್ರೌಪದಿಯನ್ನು ಒಡ್ಡಿ ಸೋಲುತ್ತಾನೆ.

ದ್ರೌಪದಿಯನ್ನು ಕರೆತರಲು ವಿದುರನಿಗೆ ಅಪ್ಪಣೆ ಮಾಡಿದಾಗ ಅವನು ಅದನ್ನು ವಿರೋಧಿಸಲು, ದುರ್ಯೋಧನನು ಪ್ರತಿಕಾಮಿಯೊಬ್ಬನಿಗೆ ಆಜ್ಞೆ ಮಾಡುತ್ತಾನೆ. 'ಮೊದಲು ತನ್ನನ್ನು ಒಡ್ಡಿಕೊಂಡು ಸೋತನೋ ನನ್ನನ್ನು ಒಡ್ಡಿ ಸೋತನೋ' ಕೇಳಿ ಬಾ ಎಂದು ಕಳುಹಿಸುತ್ತಾಳೆ ದ್ರೌಪದಿ. ಪಾಂಚಾಲಿಯೇ ಇಲ್ಲಿಗೆ ಬಂದು ಅದನ್ನು ಕೇಳಲಿ ಎಂದು ಅಟ್ಟಹಾಸಗೈದಾಗ ಯುಧಿಷ್ಠಿರ ನಂಬಿಕೆಯಿರುವ ದೂತರನ್ನು ಕಳಿಸಿ ಕರೆಸುತ್ತಾನೆ. ದುರ್ಯೋಧನನು ದುಶ್ಯಾಸನನಿಗೆ ಎಳೆತರುವಂತೆ ಸೂಚಿಸುತ್ತಾನೆ. 'ಅಯ್ಯೋ ಅನಾರ್ಯ! ನಾನು ಬಹಿಷ್ಠೆಯಾಗಿದ್ದೇನೆ. ಒಂದೇ ಬಟ್ಟೆಯಲ್ಲಿದ್ದೇನೆ. ಸಭೆಗೆ ಬರುವ ಸ್ಥಿತಿಯಲ್ಲಿಲ್ಲ' ಎಂದು ಗೋಳಿಟ್ಟರೂ ಕರೆದುಕೊಂಡುಬರುತ್ತಾನೆ. ಧೃತರಾಷ್ಟ್ರನ ಒಬ್ಬ ಮಗನಾದ ವಿಕರ್ಣನ ವಿರೋಧವನ್ನು ಲೆಕ್ಕಿಸದೆ ಕರ್ಣನು 'ಯುಧಿಷ್ಠಿರನು ತನ್ನ ಸರ್ವಸ್ವವನ್ನು ಒಡ್ಡಿ ಕಳೆದುಕೊಂಡಾಗ ಕೃಷ್ಣೆಯನ್ನು ಸೋಲಲಿಲ್ಲ ಎಂದು ಹೇಳುತ್ತೀಯ ಹೇಗೆ? ಸರ್ವಸ್ವದಲ್ಲಿ ದ್ರೌಪದಿ ಸೇರಿಲ್ಲವೇ? ಎಂದು ಸಮರ್ಥಿಸಿಕೊಳ್ಳುತ್ತಾ ಅವರ ಬಟ್ಟೆಯನ್ನು ತರುವಂತೆ ದುಶ್ಯಾಸನನಿಗೆ ಹೇಳುತ್ತಾನೆ.

ದುಶ್ಯಾಸನನು ಬಲಾತ್ಕಾರದಿಂದ ದ್ರೌಪದಿಯ ಬಟ್ಟೆಯನ್ನು ಸೆಳೆದುಕೊಳ್ಳಲು ಅದೇ ವಿಧವಾದ ಇನ್ನೊಂದು ಸೀರೆ ಒಳಗೆ ಕಾಣಿಸಿಕೊಂಡಿತು. ಅದರ ಹಿಂದೆ ಮತ್ತೊಂದು, ಇನ್ನೊಂದು ಹೀಗೆ ಅನೇಕ ಸೀರೆಗಳು ಎಳೆದೆಳೆದ ಹಾಗೆಲ್ಲಾ ಬಂದವು. ದ್ರೌಪದಿಯ ಸೀರೆ ಅಕ್ಷಯವಾಗಲು ಅದನ್ನು ಎಳೆದು ಎಳೆದು ಅವಮಾನವೂ ಆಯಾಸವೂ ಆಗಿ ದುಶ್ಯಾಸನನು ಕುಳಿತುಬಿಟ್ಟನು. ಸಭೆಯಲ್ಲಿ ಸೀರೆಯ ರಾಶಿಬಿದ್ದು ಹೋಯಿತು.

ದುರ್ಯೋಧನನು ದ್ರೌಪದಿಯನ್ನು ನೋಡುತ್ತಾ ಭೀಮನನ್ನು ಮೂದಲಿಸುವಂತೆ ತಾನು ಉಟ್ಟಿದ್ದ ಬಟ್ಟೆಯನ್ನು ಓರೆಮಾಡಿ ಆನೆಯ ಸೊಂಡಲಿನಂತಿದ್ದ ತನ್ನ ತೊಡೆಯನ್ನು ಅವಳಿಗೆ ತೋರಿಸಿ ಕೂರುವಂತೆ ಹೇಳಿದನು. ಅದನ್ನು ಕಂಡು ಭೀಮಸೇನನು ಕೆಂಪಾದ ತನ್ನ ಕಣ್ಣುಗಳನ್ನು ಅರಳಿಸಿ ಬಿರುಗಣ್ಣಿನಿಂದ ನೋಡುತ್ತ ಸಭೆಗೆ ಹೇಳುವಂತೆ "ಯುದ್ಧದಲ್ಲಿ ಈ ತೊಡೆಯನ್ನು ಗದೆಯಿಂದ ಮುರಿಯದಿದ್ದರೆ ನನಗೆ ಪರಲೋಕದಲ್ಲಿ ಸದ್ಗತಿ ಸಿಗದೆ ಹೋಗಲಿ!" ಎಂದು ಪ್ರತಿಜ್ಞೆ ಮಾಡಿದನು.

ತುಂಬಿದ ಸಭೆಯಲ್ಲಿ ದ್ರೌಪದಿಯನ್ನು ಅವಮಾನಗೊಳಿಸಿದ್ದಕ್ಕೆ ಪ್ರತಿಯಾಗಿ ಧೃತರಾಷ್ಟ್ರನು ದ್ರೌಪದಿಗೆ ಮೂರು ವರಗಳನ್ನು ಕೊಡಲು ಮುಂದಾದನು. ದ್ರೌಪದಿಯು

ಆ ಮೂರು ವರಗಳಿಂದ ಈಗಾಗಲೇ ಸೋತಿದ್ದ ಗಂಡಂದಿರನ್ನು ಸಕಲ ಸಂಪತ್ತನ್ನು ಹಿಂಪಡೆದುಕೊಂಡಳು. ಎಲ್ಲರೂ ಇಂದ್ರಪ್ರಸ್ಥಕ್ಕೆ ಹೊರಟರು.

ಧೃತರಾಷ್ಟ್ರನು ದುರ್ಯೋಧನನ ಮಾತಿಗೆ ಕಟ್ಟುಬಿದ್ದು ಇಂದ್ರಪ್ರಸ್ಥಕ್ಕೆ ಹೊರಟಿದ್ದ ಪಾಂಡವರನ್ನು ಮತ್ತೆ ಜೂಜಿಗೆ ಆಹ್ವಾನಿಸಿದನು. ಎರಡನೆಯ ಬಾರಿ ಆಡುವ ಜೂಜು ಒಂದು ಷರತ್ತಿಗೆ ಒಳಪಟ್ಟಿತು. ಅದೇನೆಂದರೆ ಪಾಂಡವರು ಜೂಜಿನಲ್ಲಿ ಸೋತರೆ ಹನ್ನೆರಡು ವರ್ಷ ಕಾಡಿಗೆ ಹೋಗಬೇಕು. ಹದಿಮೂರನೆಯ ವರ್ಷ ಅಜ್ಞಾತವಾಸ ಮಾಡಬೇಕು. ಆವಾಗ ಗೊತ್ತುಹಚ್ಚ ಬಿಟ್ಟರೆ ಇನ್ನು ಹತ್ತೆರಡು ವರ್ಷ ಕಾಡಿಗೆ ಹೋಗಬೇಕು. ಇದು ಕೌರವನಿಗೂ ಅನ್ವಯಿಸುವ ಷರತ್ತಾಗಿತ್ತು. ಎರಡನೆಯ ಬಾರಿಯು ಧರ್ಮರಾಯನು ಸಕಲವನ್ನು ಸೋತು ಕಾಡಿಗೆ ಹೊರಟರು. ಭೀಮನು ನಾನು ಯುದ್ಧದಲ್ಲಿ ದುರ್ಯೋಧನನನ್ನು ಗದೆಯಿಂದ ಕೊಂದು ಅವನ ತಲೆಯನ್ನು ಮೆಟ್ಟುತ್ತೇನೆ. ಮಾತಿನಮಲ್ಲನಾದ ಈ ದುಶ್ಯಾಸನನ ರಕ್ತವನ್ನು ಹೀರುತ್ತೇನೆ; ಅರ್ಜುನನು ಕರ್ಣನನ್ನೂ, ಶಕುನಿಯನ್ನು ಸಹದೇವನು ಕೊಲ್ಲುತ್ತಾನೆಂದು ಭೀಮನು ಪ್ರತಿಜ್ಞೆಮಾಡಿದನು. ಅದರಂತೆ ಅರ್ಜುನ ಮತ್ತು ಸಹದೇವನು ಪ್ರತಿಜ್ಞಾ ಮಾಡಿದರು.

**ಕರ್ಣನೊಡನೆ ಭೇದೋಪಾಯ:**

ರಾಯಭಾರಕ್ಕೆ ಪಾಂಡವರ ಪರವಾಗಿ ಬಂದಿದ್ದ ಕೃಷ್ಣ. ಅದು ವಿಫಲವಾದಾಗ ತನ್ನ ವಿರಾಟ, ಘೋರ ರೂಪವನ್ನು ತೋರಿಸಿ ಸಿಂಹದ ನಡಿಗೆಯಿಂದ ಹೊರಬರುತ್ತಾನೆ. 'ಭೀಷ್ಮಾದಿ ಕೌರವ ಪ್ರಮುಖರನ್ನೆಲ್ಲಾ ಬೀಳ್ಕೊಟ್ಟು ಕರ್ಣನೊಬ್ಬನನ್ನು ಮಾತ್ರ ತನ್ನ ರಥದಲ್ಲಿ ಕೂರಿಸಿಕೊಂಡು ಹೊರಟನು. ಊರಿನಿಂದ ಹೊರಕ್ಕೆ ಹೋದ ಮೇಲೆ ಅವನನ್ನು ಕುರಿತು ಕರ್ಣ! ನೀನು ವೇದ ಪಾರಂಗತರಾದ ಬ್ರಾಹ್ಮಣರನ್ನು ಸೇವಿಸಿ ಅವರಿಂದ ತತ್ವಾರ್ಥವನ್ನು ಕೇಳಿ ತಿಳಿದುಕೊಂಡವನು. ಧರ್ಮಶಾಸ್ತ್ರ ಸೂಕ್ಷ್ಮಗಳನ್ನೆಲ್ಲಾ ಬಲ್ಲವನು. ಆದ್ದರಿಂದ ಕನ್ಯೆಯಲ್ಲಿ ಹುಟ್ಟಿದ ಕಾನೀನ, ಸಹೋಢ ಎಂಬ ಪುತ್ರ ಆಮೇಲೆ ಅವಳನ್ನು ಮದುವೆಯಾದವನಿಗೂ ಶಾಸ್ತ್ರೀಯವಾಗಿ ಮಕ್ಕಳೇ ಎಂಬುದನ್ನು ನೀನು ಬಲ್ಲೆ. ನೀನು ಹಾಗೆ ಕಾನೀನವಾಗಿ ಹುಟ್ಟಿ, ಧರ್ಮದಲ್ಲಿ ಪಾಂಡುವಿನ ಮಗನಾಗಿದ್ದಯೇ. ಪಾಂಡವರಿಗೆ ಹಿರಿಯನಾಗಿದ್ದಿಯೇ ಆದ್ದರಿಂದ ರಾಜ್ಯಾಧಿಕಾರವು ನಿನಗೇ ಬರಬೇಕು. ತಂದೆಯ ಸಂಬಂಧದಿಂದ ಪಾಂಡವರೂ ತಾಯಿಯ ಸಂಬಂಧದಿಂದ ವೃಷ್ಣಿಗಳೂ ನಿನ್ನವರಾದರು. ಆದ್ದರಿಂದ ಈಗ ನನ್ನ ಜೊತೆಯಲ್ಲ ಬಂದುಬಿಡು, ಪಾಂಡವರು ನಿನಗೆ ನಮಸ್ಕರಿಸಿ ನಿನ್ನನ್ನು ಅಣ್ಣನೆಂದು ಗೌರವಿಸುತ್ತಾರೆ. ದ್ರೌಪದಿ ಮತು ಸುಭದ್ರೆಯ ಮಕ್ಕಳೂ ಪಾಂಡವರ ಕಡೆಯ ರಾಜರೂ ನಿನ್ನನ್ನು ಸೇವಿಸುತ್ತಾರೆ. ಕಾಲಕ್ರಮದಲ್ಲಿ ದ್ರೌಪದಿಯು ನಿನ್ನನ್ನು ಆರನೆಯ ಗಂಡನೆಂದು ಭಾವಸುತ್ತಾಳೆ. ನಾನು ನಿನಗೆ ರಾಜನನ್ನಾಗಿ ಪಟ್ಟಾಭಿಷೇಕ ಮಾಡುತ್ತೇನೆ. ಯುಧಿಷ್ಠಿರನು

ಯುವರಾಜನಾಗುತ್ತಾನೆ ಎಂದು ಕೃಷ್ಣ ಕರ್ಣನ ಜನ್ಮವೃತ್ತಾಂತವನ್ನು ತಿಳಿಸುತ್ತಾನೆ. ಈ ವಿಷಯವನ್ನು ಸೂರ್ಯನಿಂದ ಮೊದಲೇ ತಿಳಿದಿದ್ದ ಕರ್ಣನು ಈ ಆಹ್ವಾನವನ್ನು ನಿರಾಕರಿಸುತ್ತಾನೆ. 'ಕುಂತಿಯು ನನ್ನನ್ನು ಅಪಾಯವಾಗುವ ರೀತಿಯಲ್ಲಿ ತೊರೆದಳು. ಆದರೆ ಸೂತನಾದ ಅಥಿರಥ ಪುತ್ರಪ್ರೇಮಕ್ಕೆ ಮಿತಿಯೇ ಇಲ್ಲ. ಬ್ರಾಹ್ಮಣರಿಂದ ನಾಮಕರಣ ಮಾಡಿಸಿ, ಯೌವನದಲ್ಲಿ ಮದುವೆಯನ್ನೂ ಮಾಡಿದ್ದಾನೆ. ಆ ಹೆಂಡಿರಲ್ಲಿ ನನಗೆ ಮಕ್ಕಳೂ, ಮೊಮ್ಮಕ್ಕಳೂ ಆಗಿವೆ. ಅಲ್ಲದೆ ದುರ್ಯೋಧನನ ಆಶ್ರಯದಲ್ಲಿ ಹದಿಮೂರು ವರ್ಷ ರಾಜ್ಯ ಸುಖ ಅನುಭವಿಸಿದೆ. ಸೂತರಲ್ಲಿಯೇ ಕೊಟ್ಟು ತಂದು ಸಂಬಂಧ ಬೆಳೆದಿದೆ. ಈಗ ಯುದ್ಧದಲ್ಲಿ ನಾನು ಅರ್ಜುನನನ್ನು ಎದುರಿಸಿ ನಿಲ್ಲದಿದ್ದರೆ ಇಬ್ಬರಿಗೂ ಕೆಟ್ಟ ಹೆಸರುಬರುತ್ತದೆ. ನಾನು ಕುಂತಿಯ ಹಿರಿಯ ಮಗನೆಂದು ತಿಳಿದರೆ ಧರ್ಮರಾಜನು ರಾಜ್ಯವನ್ನು ಒಪ್ಪಿಕೊಳ್ಳುವುದಿಲ್ಲ. ನನಗೆ ಕೊಟ್ಟರೆ ನಾನು ಮತ್ತೆ ದುರ್ಯೋಧನನಿಗೆ ಕೊಡುತ್ತೇನೆ. ಆದ್ದರಿಂದ ಧರ್ಮಾತ್ಮನಾದ ಯುಧಿಷ್ಠಿರನೇ ಸ್ಥಿರವಾಗಿ ದೊರೆಯಾಗಲಿ ಎಂದು ಕೃಷ್ಣನಿಗೆ ಉತ್ತರಿಸುತ್ತಾನೆ.

**ಕುಂತಿಯು ಕರ್ಣನನ್ನು ಕಂಡದ್ದು:**

ಕೃಷ್ಣನು ಸಂಧಿ ಮಾಡಿಸಲಾರದೆ ಹೊರಟು ಹೋದ ಮೇಲೆ ಕುಂತಿಯು ಚಿಂತಿಸುತ್ತ 'ಅಯ್ಯೋ! ಹಾಳು ಯುದ್ಧವೇ! ಜ್ಞಾತಿಗಳು ಅನ್ಯಾಯವಾಗಿ ಪರಸ್ಪರ ಹೊಡೆದಾಡಿ ಸಾಯುತ್ತಾರಲ್ಲ! ಜ್ಞಾತಿಗಳನ್ನು ಕೊಂದು ಪಡೆದ ಜಯ ಏನು ಜಯ? ನನಗೆ ಭೀಷ್ಮ ದ್ರೋಣ ಕರ್ಣ ಮುಖ್ಯವಾಗಿ ಈ ಮೂವರಿಂದ ಭಯ ಭೀಷ್ಮನಿಗೆ ಪಾಂಡವರ ಮೇಲೆ ಪ್ರೀತಿ, ದ್ರೋಣನಿಗೂ ಅವರ ಮೇಲೆ ಶಿಷ್ಯರೆಂದು ಪ್ರೀತಿ, ಅವನು ಅವರ ಮೇಲೆ ಕೈಮಾಡಲಾರ ಸುಮ್ಮನೆ ಕಣ್ಣು ಮುಚ್ಚಿಕೊಂಡು ದುರ್ಯೋಧನನ ಬಾಲ ಹಿಡಿದು ಹೋಗುತ್ತ ಪಾಂಡವರನ್ನು ಸದಾ ದ್ವೇಷಿಸುತ್ತಿರುವ ಕರ್ಣನೊಬ್ಬನದೇ ಭಯ. ಅವನನ್ನು ಕಂಡು ಹೇಗಾದರೂ ಪಾಂಡವರ ಕಡೆಗೆ ಒಲಿಸಿಕೊಳ್ಳುವುದಕ್ಕೆ ಪ್ರಯತ್ನ ಮಾಡಿನೋಡುತ್ತೇನೆ ಎಂದುಕೊಂಡು ಗಂಗಾತೀರಕ್ಕೆ ಬಂದಳು. ಅಲ್ಲಿ ಕರ್ಣನು ಪೂರ್ವಾಭಿಮುಖವಾಗಿ ತೋಳನೆತ್ತಿ ನಿಂತುಕೊಂಡು ಜಪಮಾಡುತ್ತಿದ್ದನು. ಅಪರಾಹ್ಣ ಬಂದು ಜಪ ಪೂರೈಸಿದ ಮೇಲೆ ಕರ್ಣನು ಹಿಂತಿರುಗಿ ನೋಡಿ ಕುಂತಿಗೆ ಕೈಮುಗಿದನು. 'ಇಗೋ ರಾಧೆಯ ಮತ್ತು ಅಧಿರಥನ ಮಗನಾಗಿ ಕರ್ಣನು ನಮಸ್ಕರಿಸುತ್ತಿದ್ದಾನೆ. ಏಕೆ ಬಂದಿದ್ದೀಯೇ ತಾಯಿ? ನನ್ನಿಂದೇನಾಗಬೇಕು ಎಂದು ಕೇಳಿದನು. ಅದಕ್ಕೆ ಕುಂತಿಯು ಕರ್ಣ! ನೀನು ಕೌಂತೇಯ, ರಾಧೇಯನಲ್ಲ, ಅಧಿರಥ ನಿನ್ನ ತಂದೆಯಲ್ಲ ನೀನು ನನ್ನ ಹೊಟ್ಟೆಯಲ್ಲಿ ಕಾನೀನನಾಗಿ ಹುಟ್ಟಿದನು, ಮಗು! ಈ ಸೂರ್ಯದೇವನು ನಿನ್ನ ತಂದೆ ನೀನು ನಿನ್ನ ಒಡಹುಟ್ಟಿದವರನ್ನು ಅರಿಯದೆ ಅಜ್ಞಾನದಿಂದ ಕೌರವರನ್ನು ಸೇವಿಸಿದ್ದೀಯ ಅರ್ಜುನನು ಸಂಪಾದಿಸಿ ಈಗ ಕೌರವರು ಅಪಹರಿಸಿದ ರಾಜ್ಯ ಸಂಪತ್ತನ್ನು

ಅನುಭವಿಸು! ಕರ್ಣಾರ್ಜುನರು ಸೇರಿ ಸ್ನೇಹದಿಂದಿರುವುದನ್ನು ಕೌರವರು ಕಾಣಲಿ! ನೀವಿಬ್ಬರೂ ಸೇರಿದರೆ ಲೋಕದಲ್ಲಿ ನಿಮಗೆ ಅಸಾಧ್ಯವಾದದ್ದು ಯಾವುದು ಇದ್ದೀತು? ತಂದೆತಾಯಿಗಳನ್ನು ಸಂತೋಷಪಡಿಸುವುದು ಮಕ್ಕಳಿಗೆ ಧರ್ಮ ಎಂದು ಉಪದೇಶಿಸುತ್ತಾಳೆ. ಇದಕ್ಕೆ ಕರ್ಣನು 'ನೀನು ಕ್ಷತ್ರಿಯ ಆದ್ದರಿಂದ ನನ್ನ ಮಾತನ್ನು ನಂಬದಿರಲಾರೆ. ನೀನು ನನ್ನನ್ನು ಅನ್ಯಾಯವಾಗಿ ತೊರೆದುಬಿಟ್ಟಿದ್ದರಿಂದ ಕೆಟ್ಟ ಹೆಸರು ಬರುವಂತಾಯಿತು. ಕ್ಷತ್ರಿಯನಾಗಿ ಹುಟ್ಟಿಯೂ ಕ್ಷತ್ರಿಯ ಸಂಸ್ಕಾರ ಲಭಿಸಲಿಲ್ಲ. ಅಂತಃಕರಣ ತೋರಿಸಬೇಕಾದ ಕಾಲದಲ್ಲಿ ತೋರಿಸದೆ, ತಾಯಿಯಂತೆ ನಡೆದುಕೊಳ್ಳದೆ ಈಗ ಸ್ವಾರ್ಥದಿಂದ ಬಂದು ತಾಯಿಯೆಂದು ಹೇಳುತ್ತಿರುವೆಯಲ್ಲ... ಹಿಂದೆ ಅಣ್ಣತಮ್ಮಂದಿರ ಸೊಲ್ಲನ್ನೇ ಎತ್ತದಿದ್ದವನು ಯುದ್ಧಕಾಲದಲ್ಲಿ ಆ ಸಂಬಂಧ ಹೇಳಿದರೆ ಕ್ಷತ್ರಿಯರು ಏನೆಂದಾರು? ಕೌರವರು ನನ್ನ ಇಷ್ಟಾರ್ಥಗಳನ್ನೆಲ್ಲಾ ಸಲ್ಲಿಸಿ ಗೌರವಿಸಿ, ಐಶ್ವರ್ಯದಲ್ಲಿ ಪಾಲುಕೊಟ್ಟ ನನ್ನನ್ನು ನೋಡಿಕೊಳ್ಳುತ್ತಿರುವಾಗ ನಾನು ಅದನ್ನೆಲ್ಲಾ ನಿಷ್ಫಲಗೊಳಿಸಲೇ.... ಅನ್ನವಿಟ್ಟ ಯಜಮಾನನನ್ನು ಸಮಯದಲ್ಲಿ ಕೈಬಿಡುವ ಪಾಪಿಗಳಿಗೆ ಇಹಪರಗಳೆರಡೂ ಇಲ್ಲ. ಆದ್ದರಿಂದ ನಾನು ದುರ್ಯೋಧನನಿಗೋಸ್ಕರವಾಗಿಯೇ ನಿನ್ನ ಮಕ್ಕಳ ಮೇಲೆ ನನ್ನ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಯುದ್ಧ ಮಾಡಿಯೇ ತೀರುತ್ತೇನೆ. ಆದರೆ ನೀನು ಬಂದ ಕೆಲಸ ವ್ಯರ್ಥವಾಗಬಾರದು. ಆದ್ದರಿಂದ ನಿನ್ನ ಮಕ್ಕಳೆಲ್ಲರೂ ವಧ್ಯರೇ ಆದರೂ ಯುಧಿಷ್ಠಿರ, ಭೀಮ, ನಕುಲ, ಸಹದೇವರನ್ನು ನಾನು ಕೊಲ್ಲುವುದಿಲ್ಲ ಅರ್ಜುನನೊಡನೆ ನನಗೆ ಯುದ್ಧ ಬಿದ್ದೆಬೀಳುತ್ತದೆ. ಆಗ ನಾನು ಅವನನ್ನು ಕೊಂದರೆ ನನ್ನ ಉದ್ದೇಶ ನೆರವೇರಿತು. ಅವನೇ ನನ್ನನ್ನು ಕೊಂದರೇ ಕೀರ್ತಿ ಬಂತು. ಅಂತೂ ನಿನಗೆ ಇರುವ ಐದು ಜನ ಮಕ್ಕಳೇನೂ ಕಡಿಮೆಯಾಗುವುದಿಲ್ಲ! ಎಂದು ಅಭಯ ನೀಡುತ್ತಾನೆ.

ಕುಂತಿಯು ದುಃಖದಿಂದ ಕಂಪಿಸುತ್ತ ಅವನನ್ನು ತಬ್ಬಿಕೊಂಡು 'ಕರ್ಣ! ಹಾಗೆಯೇ ಆಗಲಿ, ನೀನು ನಿನ್ನ ನಾಲ್ಕು ಜನ ಸಹೋದರರಿಗೆ ಅಭಯ ಕೊಟ್ಟಿರುವುದನ್ನು ಯುದ್ಧ ಕಾಲದಲ್ಲಿ ಮರೆಯದಿರು! ನಿನಗೆ ಶುಭವಾಗಲಿ ಎಂದು ಹೇಳಿದಳು. ಕರ್ಣನು ಅವಳಿಗೆ ನಮಸ್ಕರಿಸಿದನು. ಇಬ್ಬರೂ ಅವರವರ ದಾರಿ ಹಿಡಿದು ಹೋದರು.

**ಶಲ್ಯನ ಸಹಾಯ:**

ಪಾಂಡವರ ಪ್ರಾರ್ಥನೆಯಂತೆ ಮದ್ರರಾಜನಾದ ಶಲ್ಯನು ತನ್ನ ಮಹಾರಥರಾದ ಮಕ್ಕಳೊಡನೆಯೂ ಅಪಾರವಾದ ಸೇನೆಯೊಡನೆ ಬರುತ್ತಿರಲು ದುರ್ಯೋಧನನು ಅವರು ಬರುತ್ತಿದ್ದ ದಾರಿಯಲ್ಲಿ ರಮಣೀಯವಾದ ಸ್ಥಳಗಳನ್ನು ನೋಡಿ ಅಲ್ಲಿ ದಿವ್ಯಸುಂದರವಾದ ಮಂಟಪಗಳನ್ನು ಮಾಡಿಸಿ ಅವುಗಳೊಳಗೆ ಅವರ ಸತ್ಕಾರಕ್ಕೆ

ಏರ್ಪಡಿಸಿದನು. ಶಲ್ಯನು ಅದನ್ನು ನೋಡಿ ಸಂತೋಷಪಟ್ಟು ಈ ಮಂಟಪಗಳನ್ನು ಕಟ್ಟಿದವರು ಯಾರು ಕರೆಯಿರಿ. ನಾನು ಅವರಿಗೆ ಬಹುಮಾನ ಮಾಡಬೇಕು! ಎಂದನು. ಮರೆಯಾಗಿದ್ದ ದುರ್ಯೋಧನನು ಮುಂದೆ ಬಂದು ತಾನೇ ಅದಕ್ಕೆಲ್ಲಾ ಏರ್ಪಾಡು ಮಾಡಿದ್ದವನೆಂದು ಹೇಳಿದಾಗ ಶಲ್ಯನು ಸಂತೋಷಪಡುತ್ತಾನೆ. "ನೀನು ಅಖಂಡ ಕೌರವಸೇನೆಗೆ ನೇತೃವಾಗಬೇಕು' ಎಂಬ ದುರ್ಯೋಧನನ ಮಾತಿಗೆ ಒಪ್ಪುತ್ತಾನೆ. ಇದನ್ನೆಲ್ಲಾ ಯುದಷ್ಠಿರನ ಬಲಿ ಬಂದು ಹೇಳಿದಾಗ ಅವನು 'ನೀನು ನಮಗೆ ಒಂದು ಉಪಕಾರ ಮಾಡು! ನೀನೂ ವಾಸುದೇವನೂ ಯುದ್ಧದಲ್ಲಿ ಸರಿಸಮರೆಂದು ಗಣ್ಯರಾಗಿದ್ದೀರಿ. ಕರ್ಣಾರ್ಜುನರಿಗೆ ಮುಂದೆ ಪರಸ್ಪರ ರಥ ಯುದ್ಧ ಒದಗಿದಾಗ ನೀನು ಕರ್ಣನಿಗೆ ಸಾರಥ್ಯ ಮಾಡಬೇಕಾಗುತ್ತದೆ. ಮಾವ! ನನ್ನಲ್ಲಿ ನಿನಗೆ ವಿಶ್ವಾಸವಿರುವುದಾದರೆ ಆಗ ನೀನು ಅರ್ಜುನನ್ನು ಕಾಪಾಡಿಕೊಳ್ಳಬೇಕು ಕರ್ಣನಿಗೆ ತೇಜೋವಧೆ ಮಾಡಬೇಕು' ಎಂದು ಕೇಳಿಕೊಳ್ಳುತ್ತಾನೆ.

**ಭೀಷ್ಮರಿಗೆ ಸೇನಾನಿಪಟ್ಟ:**

ಯುದ್ಧ ನಿಶ್ಚಯವಾಯಿತು. ಪಾಂಡವರಿಗಿದ್ದ ಏಳು ಅಕ್ಷೌಹಿಣೀ ಸೇನೆಗೆ ದ್ರುಪದ, ವಿರಾಟ, ಶಿನ, ದೃಷ್ಟದ್ಯುಮ್ನ, ದೃಷ್ಟಕೇತು, ಶಿಖಂಡಿ ಮತ್ತು ಮಗಧ ದೇಶದ ಸಹದೇವ ಅಕ್ಷೌಹಿಣಿ ಪತಿಗಳಾದರೆ ದೃಷ್ಟದ್ಯುಮ್ನ ಪ್ರಧಾನ ಸೇನಾಧಿಪತಿಯಾಗುತ್ತಾನೆ.

ಇತ್ತಕಡೆ ದುರ್ಯೋಧನನಲ್ಲಿ ಭೀಷ್ಮನು ಪ್ರಧಾನ ಸೇನಾನಾಯಕನಾದರೆ ಕೃಪ, ದ್ರೋಣ, ಶಲ್ಯ, ಜಯದ್ರಥ ಇತ್ಯಾದಿ ಹನ್ನೊಂದು ಮಂದಿ ಅಕ್ಷೌಹಿಣಿ ಪತಿಗಳಾಗುತ್ತಾರೆ. 'ಭೀಷ್ಮನು ಸೇನಾಧಿಪತ್ಯವನ್ನು ಪಡೆದ ಕೂಡಲೆ ದೇವಸೇನಾಧಿಪತಿಯಾದ ಕುಮಾರಸ್ವಾಮಿ ನಮಸ್ಕರಿಸಿ, ದುರ್ಯೋಧನನನ್ನು ಪ್ರೋತ್ಸಾಹಗೊಳಿಸುತ್ತಾ 'ಮಹಾರಾಜ! ನಾನು ಈ ಸೇನಾಧಿಪತಿತ್ವವನ್ನು ಅಂಗೀಕರಿಸಿದ್ದೇನೆ. ನಾನು ನಮ್ಮಲ್ಲಿ ಸಂಬಳಕ್ಕಿರುವ ಯೋಧರಿಂದಲೂ ಸಂಬಳವಿಲ್ಲದೆ ಸಹಾಯಕ್ಕಾಗಿ ಬಂದಿರುವ ಯೋಧರಿಂದಲೂ ತಕ್ಕರೀತಿಯಲ್ಲಿ ಕೆಲಸ ತೆಗೆದುಕೊಂಡು ಪಾಂಡವರೂ ಬೆರಗಾಗುವಂತೆ ವ್ಯೂಹಗಳನ್ನು ರಚಿಸಿ, ನಿನ್ನ ಸೈನ್ಯವನ್ನು ರಕ್ಷಿಸಿಕೊಂಡು ಮನಸ್ಸಿಟ್ಟು ಯುದ್ಧಮಾಡುತ್ತೇನೆ. ನೀನು ಕಳವಳಪಡಬೇಡ ಎಂದು ಅಭಯನೀಡುತ್ತಾನೆ.

**ದುಶ್ಯಾಸನ ವಧೆ:**

ಕರ್ಣ ಸೇನಾನಿಯಾದ ನಂತರ ವೀರಾವೇಶದಿಂದ ಪಾಂಚಾಲರ ಮೇಲೆ ಬಿದ್ದು ಶತಾನೀಕ, ಸುತಸೋಮ ದೃಷ್ಟದ್ಯುಮ್ನಾದಿಗಳನ್ನು ಎದುರಿಸುತ್ತಾನೆ. ಸಾತ್ಯಕಿ ಕರ್ಣನ ಮಗನನ್ನು ಕೊಂದರೆ ಕರ್ಣನು ದೃಷ್ಟದ್ಯುಮ್ನನ ಮಗನನ್ನು ಕೊಲ್ಲುತ್ತಾನೆ. ಆಗ ಕೃಷ್ಣನು ಕರ್ಣನೆಡೆಗೆ ರಥವನ್ನು ಓಡಿಸಿದಾಗ ಭೀಮನೂ ಹಿಂಬಾಲಿಸುತ್ತಾನೆ. ಆ ಸಂದರ್ಭದಲ್ಲಿ

ಎದುರಾದ ದುಶ್ಯಾಸನನನ್ನು ನೋಡಿ ಸಿಂಹದಂತೆ ಅವನ ಮೇಲೆ ಬೀಳುತ್ತಾನೆ. 'ದುಶ್ಯಾಸನ ಅದೃಷ್ಟವಶದಿಂದ ಇಂದು ನನ್ನ ಕಣ್ಣಿಗೆ ಬಿದ್ದೆ ಬಾ! ಇವೊತ್ತು ನಿನ್ನ ಸಾಲವನ್ನೆಲ್ಲಾ ಬಡ್ಡಿಸಹಿತವಾಗಿ ತೀರಿಸಿಬಿಡುತ್ತೇನೆ ಎಂದು ಅಬ್ಬರಿಸಿ ಅವನ ಬಿಲ್ಲನ್ನೂ ಸಾರಥಿಯನ್ನೂ ಕತ್ತರಿಸುತ್ತಾನೆ... ಭೀಮಸೇನನು ಹದಿಮೂರು ವರ್ಷಗಳಿಂದ ತಾನು ಪಟ್ಟ ದುಃಖವನ್ನು ನೆನೆದು ದುಶ್ಯಾಸನನ್ನು ಗದೆಯಿಂದ ಹೊಡೆದು ಕೆಳಗೆ ಬೀಳಿಸಿದನು. ಅನಂತರ ಕೃಷ್ಣೆಯು ಅವನಿಂದ ಪಟ್ಟ ಭಂಗಗಳನ್ನೆಲ್ಲಾ ನೆನೆದು, ತುಪ್ಪ ಬಿದ್ದ ಬೆಂಕಿಯಂತೆ ಉರಿಯುತ್ತ ಕರ್ಣ, ದುರ್ಯೋಧನ, ಕೃಪ, ಅಶ್ವತ್ಥಾಮ ಕೃತವರ್ಮರನ್ನು ನೋಡಿ ಇಗೋ, ಈ ಪಾಪಿ ದುಶ್ಯಾಸನನನ್ನು ಕೊಲ್ಲುತ್ತೇನೆ. ಯೋಧರೆಲ್ಲರೂ ಬಂದು ಬಿಡಿಸಿಕೊಳ್ಳಿ! ಎಂದು ಗರ್ಜಿಸಿದನು. ಅವನ ಗಂಟಲನ್ನು ಮೆಟ್ಟಿ ನಿಂತು ಈಗ ಹಸು! ಹಸು!! ಎನ್ನು! ಎಂದು ಹಂಗಿಸುತ್ತ ಎದೆಯನ್ನು ಬಗೆದು ಬಿಸಿರಕ್ತವನ್ನು ಚಪ್ಪರಿಸುತ್ತ ಸುರಿದುಕೊಂಡನು. 'ಹಾಲು, ಮೊಸರು, ಕಬ್ಬಿನ ಹಾಲು, ಜೇನುತುಪ್ಪ, ತಾಯಿಯ ಸ್ತನ್ಯ ಇವೆಲ್ಲಕ್ಕಿಂತಲೂ ಈ ರಕ್ತ ರುಚಿಯಾಗಿದೆ' ಎಂದು ಹಿಗ್ಗಿದನು. ಘೋರವಾಗಿ ನಡೆಯುತ್ತಿದ್ದ ಯುದ್ಧ ಒಂದು ಕ್ಷಣದಲ್ಲಿ ತಣ್ಣಗಾಯಿತು. ಹೀಗೆ 'ಭಾರತ'ದಲ್ಲಿ ದುಶ್ಯಾಸನನ ವಧೆಯ ಪ್ರಸಂಗ ಭೀಮನ ರೋಷ, ಕ್ರೋಧಗಳಲ್ಲಿ ಹೆಪ್ಪುಗಟ್ಟಿದೆ.

**ದುರ್ಯೋಧನನ ಅಂತ್ಯ:**

ಭೀಮ ಮತ್ತು ದುರ್ಯೋಧನ ಗದಾಯುದ್ಧಕ್ಕೆ ತೊಡಗಿ ನಾನಾ ವರಸೆಗಳನ್ನು ತೋರಿಸಿದರು. ಹೀಗೆ ಬಹಳ ಹೊತ್ತು ನಡೆದು ಕಾಳಗವನ್ನು ನೋಡಿ ಕೃಷ್ಣನು, ಅರ್ಜುನನೊಡನೆ 'ಭೀಮನು ದುರ್ಯೋಧನನ ತೊಡೆಯನ್ನು ಮುರಿಯುತ್ತೇನೆಂದು ಪ್ರತಿಜ್ಞೆ ಮಾಡಿದ್ದಾನೆ. ನ್ಯಾಯದಿಂದಲೇ ಯುದ್ಧ ಮಾಡುತ್ತಿದ್ದರೆ ಇದು ಸಾಧ್ಯವಾಗು-ವುದಿಲ್ಲ. ಮೋಸಗಾರರನ್ನು ಮೋಸದಿಂದಲೇ ಜಯಿಸಬೇಕೆಂದು ಕೃಷ್ಣ ಹೇಳಿದನು. ಜೀವದ ಮೇಲೂ ಆಸೆಯಿಂದ ಯುದ್ಧ ಮಾಡುತ್ತಿರುವವರು ಆಸೆಯೆಲ್ಲವನ್ನೂ ಬಿಟ್ಟು ಒಮ್ಮನಸ್ಸಿನಿಂದ ಯುದ್ಧ ಮಾಡುತ್ತಿದ್ದಾರೆ.......... ಈಗ ಅನ್ಯಾಯದಿಂದಲಾದರೂ ದುರ್ಯೋಧನನನ್ನು ಕೊಲ್ಲದಿದ್ದರೆ ನಮಗೆಲ್ಲರಿಗೂ ಕೌರವನೇ ರಾಜನಾಗುವುದು ಖಂಡಿತ ಎಂದನು. ಇವನ ಮಾತನ್ನು ಕೇಳಿದ ಅರ್ಜುನ, ಭೀಮನಿಗೆ ಕಾಣುವ ಹಾಗೆ ತನ್ನ ಎಡದ ತೊಡೆಯನ್ನು ತಟ್ಟಿ ತೋರಿಸಿದನು. ಒಂದು ಸಾರಿ ದುರ್ಯೋಧನನು ಹೊಡೆದ ಏಟಿನಿಂದ ಭೀಮಸೇನನಿಗೆ ಮೂರ್ಛೆ ಬಂದು ಸ್ವಲ್ಪ ಹೊತ್ತು ಸ್ತಬ್ಧನಾಗಿದ್ದನು. ಅದು ದುರ್ಯೋಧನನಿಗೆ ಗೊತ್ತಾಗಲಿಲ್ಲ. ಪ್ರತಿಯಾಗಿ ಹೊಡೆಯುವುದಕ್ಕೆ ಸಿದ್ಧ ಮಾಡಿಕೊಳ್ಳುತ್ತಿದ್ದಾನೆಂದು ಕೊಂದನು. ಭೀಮನು ಅವನ ತೊಡೆಗಳಿಗೆ ಗುರಿಯಿಟ್ಟು ಬಲವಾಗಿ ಹೊಡೆದಾಗ ದುರ್ಯೋಧನನು ತೊಡೆಮುರಿದು ನೆಲದ ಮೇಲೆ ಬಿದ್ದನು.

**ಉಪಪಾಂಡವರ ಹತ್ಯೆ:**

ಗದಾಯುದ್ಧದಿಂದ ಮೈಯೆಲ್ಲಾ ರಕ್ತವಾಗಿ ಮುರಿದು ಕೆಳಗೆ ಬಿದ್ದ ದುರ್ಯೋಧನನನ್ನು ನೋಡಿ ಅಶ್ವತ್ಥಾಮನು ದುಃಖಿಸುತ್ತಾನೆ. ಈ ರಾತ್ರಿ ವಾಸುದೇವನ ಕಣ್ಣೆದುರಿಗೇ ಪಾಂಚಾಲರೆಲ್ಲರನ್ನೂ ಕೊಂದು ಬಿಡಬೇಕೆಂದಿದ್ದೇನೆ ಅನುಮತಿ ನೀಡಿ ಎನ್ನುತ್ತಾನೆ. ಕೃಪರು ಅಶ್ವತ್ಥಾಮನಿಗೆ ಸೇನಾಧಿಪತ್ಯದಲ್ಲಿ ಅಭಿಷೇಕ ಮಾಡಲು ಅವನು ದುರ್ಯೋಧನನನ್ನು ಆಲಂಗಿಸಿಕೊಂಡು ಅಲ್ಲಿಂದ ಹೊರಟನು. ಕಾಡಿನಲ್ಲಿ ಕುಳಿತಿರುವಾಗ ಒಂದು ದೃಶ್ಯ ಎದುರಾಗುತ್ತದೆ. ಆಲದ ಮರದಲ್ಲಿ ಸಾವಿರಾರು ಕಾಗೆಗಳು ನಿರ್ಭಯವಾಗಿ ನಿದ್ರಿಸುತ್ತಿದ್ದಾಗ್ ದೊಡ್ಡ ಗೂಬೆಯು ಹಾರಿಬಂದು ಅವುಗಳನ್ನು ಕ್ಷಣದಲ್ಲಿ ನಿರ್ನಾಮ ಮಾಡಿತು. ಇದನ್ನು ನೋಡಿ ಪ್ರೇರಣೆಗೊಂಡ ಅಶ್ವತ್ಥಾಮನು ಮೋಸದಿಂದಲೇ ಪಾಂಡವರ ಹತ್ಯೆ ಮಾಡಲು ಹೊರಟುಬರುತ್ತಾನೆ. ಅದರಂತೆ ಪಾಂಡವರ ಶಿಬಿರಕ್ಕೆ ನುಗ್ಗಿ ನಿದ್ರಿಸುತ್ತಿದ್ದ ದೃಷ್ಟದ್ಯುಮ್ನನನ್ನು ಛಿದ್ರಿಸಿ ಸಿಕ್ಕಿದವರನ್ನೆಲ್ಲಾ ಕೊಂದು ಬೆಂಕಿಯಿಡುತ್ತಾನೆ. ಇದನ್ನು ಬಂದು ದುರ್ಯೋಧನನಿಗೆ ತಿಳಿಸಿದಾಗ ಅವನು ಸಂತೋಷದಿಂದ ಸಾವನ್ನಪ್ಪುತ್ತಾನೆ.

ಪಾಂಡವರ ಶಿಬಿರದಲ್ಲಿ ನಡೆದ ಈ ವಿಚಾರವನ್ನು ದೃಷ್ಟದ್ಯುಮ್ನನ ಸಾರಥಿ, ಪಾಂಡವರಿಗೆ ಬಂದು ತಿಳಿಸುತ್ತಾನೆ. ಇದನ್ನು ಕೇಳಿದ ಯುಧಿಷ್ಠಿರ ಮೂರ್ಛೆ ಹೋಗುತ್ತಾನೆ. ನಂತರ ಎಚ್ಚೆತ್ತು, 'ನಾವು ಎಲ್ಲರನ್ನು ಗೆದ್ದು ಈಗ ಸೋತಂತಾಯಿತು. ಜಯವು ಅಪಜಯವಾಯಿತು. ಕರ್ಣನನ್ನೆದುರಿಸಿ ನಿಂತವರು ಈಗ ತಮ್ಮ ಅಜಾಗರೂಕತೆಯಿಂದ ಪ್ರಾಣ ಕೊಟ್ಟಂತಾಯಿತು. ಸಮುದ್ರವನ್ನು ದಾಟಿಬಂದ ವರ್ತಕರು ಒಂದು ಸೀಳು ನದಿಯಲ್ಲಿ ಸಿಕ್ಕಿ ಮುಳುಗಿದಂತಾಯಿತು. ಅವರಿಗೇನೋ ಸ್ವರ್ಗ ಲಭಿಸುತ್ತದೆ. ಆದರೆ ತಂದೆ, ಅಣ್ಣ ಮಕ್ಕಳ ಸಾವನ್ನು ಒಟ್ಟಿಗೆ ಕೇಳುವ ದ್ರೌಪದಿಯ ಗತಿಯೇನು? ಎಂದು ದುಃಖಿಸುತ್ತಾ ನಕುಲನಿಗೆ ದ್ರೌಪದಿಯನ್ನು ಕರೆತರುವಂತೆ ಹೇಳಿ ಅಲ್ಲಿಗೆ ಹೊರಡುತ್ತಾನೆ. ಬಂದ ದ್ರೌಪದಿ ಧರ್ಮರಾಜನ ಬಳಿ ಶೋಕಾರ್ತಳಾಗಿ ಬೀಳುತ್ತಾಳೆ. ನಂತರ ಎಚ್ಚೆತ್ತು ಮಹಾರಾಜ ಕ್ಷತ್ರಿಯ ಧರ್ಮಕ್ಕೆ ಮಕ್ಕಳನ್ನು ಬಲಿಕೊಟ್ಟರೂ ನೀನು ರಾಜ್ಯ ಪಡೆದೆ. ಆ ಸಂತೋಷದಲ್ಲಿ ದುಃಖವನ್ನು ಮರೆಯುತ್ತೀಯೇ. ಆದರೆ ಮಲಗಿ ನಿದ್ರಿಸುತ್ತಿದ್ದ ಮಕ್ಕಳನ್ನು ಅಶ್ವತ್ಥಾಮನು ಹಿಡಿದು ಕೊಂದನೆಂದು ಕೇಳಿ ನನ್ನ ಹೊಟ್ಟೆ ಉರಿದು ಹೋಗುತ್ತಿದೆ. ಈ ದುರಾತ್ಮನನ್ನೂ ಅವನ ಪರಿವಾರವನ್ನೂ ಕೊಲ್ಲದಿದ್ದರೆ ಪ್ರಾಯೋಪದೇಶ ಮಾಡಿ ಸಾಯುತ್ತೇನೆ ಎನ್ನುತ್ತಾಳೆ. ಅದಕ್ಕೆ ಯುಧಿಷ್ಠಿರನು ಸಮಾಧಾನಿಸುತ್ತ ಅವನನ್ನು ಹೊಡೆದು ಬೀಳಿಸಿದ್ದು ನಿನಗೆ ತಿಳಿಯುವ ಬಗೆ ಹೇಗೆ? ಎಂದಾಗ ಅಶ್ವತ್ಥಾಮನ ತಲೆಯಲ್ಲಿ ಅವನೊಡನೆ ಹುಟ್ಟಿಬಂದ

ಒಂದು ರತ್ನವಿದೆ. ಆ ಮಣಿಯನ್ನು ತಂದುಕೊಟ್ಟರೆ ಅದರಿಂದ ಅವನು ಸತ್ತನೆಂದು ತಿಳಿಯುತ್ತೇನೆ ಎನ್ನುತ್ತಾಳೆ.

**ಧೃತರಾಷ್ಟ್ರನ ಸಂಚು:**

ಪುತ್ರವಿಹೀನರಾದ ಧೃತರಾಷ್ಟ್ರ ಗಾಂಧಾರಿಯರನ್ನು ಪಾಂಡವರು ಕಾಣಲು ಬರುತ್ತಾರೆ. 'ಧೃತರಾಷ್ಟ್ರನು ಧರ್ಮರಾಜನನ್ನು ಪ್ರೀತಿಯೇನೂ ಇಲ್ಲದೆ ಆಲಂಗಿಸಿಕೊಂಡು ಭೀಮನೆಲ್ಲಿ? ಎಂದು ಕೇಳಿದನು. ಆಗ ಅವನ ಕೋಪಾಗ್ನಿಯು ದುಃಖವಾಯು ಬಸಿ ಧಗಧಗಿಸುತ್ತ ಭೀಮನನ್ನು ಸುಟ್ಟು ಉರಿಸಿಬಿಡುವಂತೆ ತೋರುತ್ತಿತ್ತು. ಅವನ ದುರುದ್ದೇಶವನ್ನು ತಿಳಿದು, ಮೊದಲೇ ತಕ್ಕ ಸಿದ್ಧತೆ ಮಾಡಿಕೊಂಡಿದ್ದ ಕೃಷ್ಣನು, ಆಗ ಭೀಮನನ್ನು ಹಿಂದಕ್ಕೆ ಕರೆದುಕೊಂಡು ಧೃತರಾಷ್ಟ್ರನ ಮುಂದೆ ಒಂದು ಕಬ್ಬಿಣದ ವಿಗ್ರಹವನ್ನು ತಳ್ಳಿದನು. ಅದನ್ನು ಭೀಮಸೇನನೆಂದು ಭಾವಿಸಿಕೊಂಡು ಧೃತರಾಷ್ಟ್ರನು ತನ್ನ ಎರಡು ಬಲವಾದ ತೋಳುಗಳಲ್ಲಿ ಅದನ್ನು ಹಿಡಿದು ತಬ್ಬಿಕೊಂಡನು. ವಿಗ್ರಹವು ನಜ್ಜುಗುಜ್ಜಾಗಿ ಹೋಯಿತು. ಧೃತರಾಷ್ಟ್ರನು ಭೀಮಸತ್ತನೆಂದು ಭಾವಿಸಿ ದುಃಖದಿಂದ ಅಯ್ಯೋ ಭೀಮ! ಅಯ್ಯೋ ಭೀಮ! ಎಂದು ಕೂಗಿಕೊಂಡನು. ಆಗ ಅವನ ಕ್ರೋಧವು ಇಳಿದಿತ್ತು. ಅದನ್ನು ತಿಳಿದ ಕೃಷ್ಣನು ನೀನು ಕೊಂದದ್ದು ಭೀಮನಲ್ಲ ಮಹಾರಾಜ! ಅವನ ಕಬ್ಬಿಣದ ಪ್ರತಿಮೆಯನ್ನು! ನಿನ್ನ ಮುಂದೆ ಇರಿಸಿದೆ.... ಮಕ್ಕಳನ್ನು ಕಳೆದುಕೊಂಡ ಹೊಟ್ಟೆಯ ಸಂಕಟದಲ್ಲಿ ಧರ್ಮದ ಮೇಲೆ ಗಮನವಿಲ್ಲದೆ ನೀನು ಭೀಮಸೇನನನ್ನು ಕೊಲ್ಲಬೇಕೆಂದಿದ್ದೆ. ಅದು ಸರಿಯಲ್ಲ ಮಹಾರಾಜ! ನೀನು ಏನು ಮಾಡಿದರೂ ನಿನ್ನ ಮಕ್ಕಳು ಜೀವಸಹಿತವಾಗಿ ಎದ್ದು ಬರುವ ಹಾಗಲ್ಲ. ಆದ್ದರಿಂದ ನಿನ್ನಕೋಪ ಶಮನಾರ್ಥವಾಗಿ ನಾನು ಮಾಡಿದ್ದನ್ನು ಸರಿಯಾಗಿ ತಿಳಿದುಕೊಂಡು ದುಃಖವನ್ನು ತಡೆದುಕೋ ಎಂದು ಸಂತೈಸಿದನು.

ಗಾಂಧಾರಿಯಾದಿಯಾಗಿ ಎಲ್ಲರೂ ರಣರಂಗಕ್ಕೆ ತೆರಳಿ ದುಃಖಿಸುತ್ತಾ ತಮ್ಮ ಬಂಧು ಜನರ ಕಳೆಬರಗಳನ್ನು ಹುಡುಕುತ್ತಾರೆ. ದುರ್ಯೋಧನನ ದೇಹ ಸಿಕ್ಕಾಗ ಗಾಂಧಾರಿ ಗೋಳಾಡುತ್ತಾಳೆ. ಎಲ್ಲರೂ ದುಃಖಪಡುತ್ತಾರೆ. ಕೊನೆಗೆ ಧರ್ಮರಾಯ-ನೊಂದಿಗೆ ದ್ರೌಪದಿಯ ಪಟ್ಟಾಭಿಷೇಕವಾಗುತ್ತದೆ.

## ಆ) ಮೂಲ ಮಾಧವಿಯ ಸಂಕ್ಷಿಪ್ತ ಕಥಾರೂಪ

'ಮಾಧವಿ'ಯ ಮೂಲಕಥೆಯನ್ನು ವಿವರವಾಗಿ ಅಧ್ಯಯನ ಮಾಡುವ ಆಸೆ ಇದ್ದರೂ, ನಿಬಂಧಕ್ಕೆ ನಿಗಧಿಪಡಿಸಿದ ಕಡಿಮೆ ಸಮಯದ ವ್ಯಾಪ್ತಿಯಲ್ಲಿ ಮೂಲಕಥೆಯನ್ನು ನೋಡಲು ಸಾಧ್ಯವಾಗಲಿಲ್ಲ. ಆ ಕೊರಗಿನಿಂದಲೇ ಸಿಕ್ಕಿರುವ ಬೆರಳೆಣಿಕೆಯಷ್ಟು ದಾಖಲೆಗಳನ್ನು ಮಾತ್ರ ಇಲ್ಲಿ ದಾಖಲಿಸಲು ಶಕ್ತಳಾಗಿದ್ದೇನೆ. ಇದಕ್ಕೆ ಸಂಬಂಧಿಸಿದಂತೆ 'ಮಾಧವಿ'. ಕಾದಂಬರಿಕಾರರಾದ ಡಾ. ಅನುಪಮ ನಿರಂಜನ ಅವರು ಕಾದಂಬರಿಯ ಮುನ್ನುಡಿಯಲ್ಲಿ ಕೊಡುವ ವಿವರ ಮೊದಲ ಆಕರವಾಗಿದೆ. ಅದು ಇಂತಿದೆ.

'ಮಹಾಭಾರತ' ಕತೆ ಸುಮಾರು ಕ್ರಿ.ಪೂ. ೧೦೦೦ದಲ್ಲಿ ನಡೆದಿರಬಹುದಾದ ದಾಯಾದಿಗಳ ಕಲಹ ಕುರಿತಾದದ್ದು. ಮಾಧವಿ 'ಮಹಾಭಾರತ'ದಲ್ಲಿ ಬರುವ ಉಪಕತೆಯಾಗದೆ. ಕ್ರಿ.ಪೂ. ೧೦೦೦ಕ್ಕೂ ಮೊದಲೇ ಘಟಿಸಿರಬೇಕು. ಯಯಾತಿ ಕುರುವಂಶದ ಮೂಲಪುರುಷ ಇವನಿಗೂ ಭೀಷ್ಮನಿಗೂ ಆರು ತಲೆಮಾರುಗಳ ಅಂತರವಿದೆ. ಹೀಗಾಗಿ 'ಮಾಧವಿ' ಕತೆ ಮಹಾಭಾರತದ ಘಟನೆಗಳಿಗಿಂತ ಸುಮಾರು ೩ನೇ ಶತಮಾನದ ಹಿಂದೆ ನಡೆದದ್ದು ಎಂದು ಊಹಿಸಲಾಗಿದೆ.

ಮಹಾಭಾರತದ ಉದ್ಯೋಗಪರ್ವದ ೧೧೪, ೧೧೭, ೧೧೮, ೧೧೯, ೧೨೦ನೆಯ ಶ್ಲೋಕಗಳಲ್ಲಿ ಪ್ರಮುಖವಾಗಿ ಮಾಧವಿಯ ಉಲ್ಲೇಖವಿರುವುದು ಕಂಡುಬರುತ್ತದೆ. ಮಾಧವಿಯ ಬದುಕಿನಲ್ಲಿ ಬರುವ ಇತರ ಪಾತ್ರಗಳಾದ ಗಾಲವ, ವಿಶ್ವಾಮಿತ್ರ, ಯಯಾತಿ, ದಿವೋದಾಸ, ಹರ್ಯಶ್ವ, ಉಶೀನರ ಇವರ ಬಗೆಗೆ ಭಾರತದ ಉದ್ಯೋಗ ಪರ್ವದ ೧೦೬, ೧೦೭, ೧೦೮, ೧೧೫ ಆದಿಪರ್ವದ ೬೯, ೭೮, ೮೭ ಸಭಾಪರ್ವದ ೮, ದ್ರೋಣಪರ್ವದ ೬೩, ಶಾಂತಿಪರ್ವದ ೨೮ ಅನುಶಾಸನ ಪರ್ವದ ೨೭೧ನೆಯ ಶ್ಲೋಕಗಳಲ್ಲಿ ಉಲ್ಲೇಖಗೊಂಡಿದೆ.

ಯಯಾತಿಯ ಭಿಕ್ಷಾರ್ಥಿಯಾಗಿ ಬಂದ ಗಾಲವನಿಗೆ ಮಾಧವಿಯನ್ನು ದಾನಮಾಡಿ ಅವಳನ್ನು ಯಾರಾದರೊಬ್ಬ ಪುಣ್ಯಾತ್ಮ ರಾಜಕುಮಾರನಿಗೆ ಕೊಟ್ಟು ಕನ್ಯಾಶುಲ್ಕದ ರೂಪದಲ್ಲಿ ನಿಮಗೆ ಬೇಕಾಗಿರುವ ಅಶ್ವಗಳನ್ನು ಪಡೆದುಕೊಳ್ಳಿ ಎಂದು ಹೇಳುತ್ತಾನೆ. ಆದರೆ ಮೈಯೆಲ್ಲ ಬೆಳ್ಳಗಿರುವ ಒಂದು ಕಿವಿಮಾತ್ರವೇ ಕಪ್ಪಾಗಿರುವ ಎಂಟುನೂರು ಅಶ್ವಗಳು ಒಬ್ಬನೇ ರಾಜನಲ್ಲಿ ಸಿಗದ ಕಾರಣ ಗಾಲವ ಮಾಧವಿಯನ್ನು ಹರ್ಯಶ್ವ, ದಿವೋದಾಸ, ಉಸೀನರಲ್ಲಿ ದಾನವಾಗಿ ಕೊಟ್ಟು ಆರು ನೂರು ಅಶ್ವಗಳನ್ನು ಸಂಪಾದಿಸುತ್ತಾನೆ. ಇನ್ನುಳಿದ ಇನ್ನೂರು ಕುದುರೆಗಳು ಸಿಗದೇ ಹೋದಾಗ, ಇನ್ನೂರು ಕುದುರೆಗಳಿಗೆ ಬದಲಾಗಿ ಗಾಲವ ವಿಶ್ವಾಮಿತ್ರನಿಗೆ ಮಾಧವ ದಾನಮಾಡುತ್ತಾನೆ.

ವಿಶ್ವಾಮಿತ್ರನೂ ಕೂಡ ಅವಳನ್ನು ಅನುಭವಿಸಿ ಒಂದು ಗಂಡುಮಗುವನ್ನು ಪಡೆದು ಗಾಲವನಿಗೆ ಹಿಂತಿರುಗಿಸುತ್ತಾನೆ. ಗಾಲವನ ಗುರುಕಾಣಿಕೆ ಕೈಗೂಡಿದಾಗ ಮಾಧವಿಯನ್ನು ಯಯಾತಿಗೆ ಮರಳಿ ಒಪ್ಪಿಸುತ್ತಾನೆ. ಪಾಪಕ್ಕಂಜಿದ ಯಯಾತಿ ಮಾಧವಿಗೆ ಸ್ವಯಂವರವನ್ನು ಏರ್ಪಡಿಸುತ್ತಾನೆ. ಮಾಧವಿ ಸ್ವಯಂವರವನ್ನು ತಿರಸ್ಕರಿಸಿ ಹೊರಟು ಹೋಗುತ್ತಾಳೆ. ಇದಿಷ್ಟು ಮೂಲಕಥೆಯ ಸಂಕ್ಷಿಪ್ತರೂಪ ಅನುಪಮ ನಿರಂಜನ ಅವರು ಅಂದಿನ ಸಮಾಜದ ರೀತಿನೀತಿ, ಸಮಾಜದ ವ್ಯವಸ್ಥೆಯನ್ನು ವೈಜ್ಞಾನಿಕ ದೃಷ್ಟಿಕೋನದಲ್ಲಿ ಕಂಡಿರಿಸಿದ್ದಾರೆ. ಯಾರದೋ ಗುರುಕಾಣಿಕೆಯನ್ನು ಸಂಪಾದಿಸಲು ಬಲಿಪಶುವಾಗ ಮಾಧವಿಯ ಅಂತರಂಗದ ಅಳಲನ್ನು ತೆರೆದಿಟ್ಟಿದ್ದಾರೆ. ಮಾಧವಿ ಬಂಡಾಯಗಾರ್ತಿಯಾಗಿ ಚಿತ್ರಿತವಾಗಿರುವುದು ಕಾದಂಬರಿಯ ವಿಶೇಷ.

**ಪುರಾಣನಾಮ ಚೂಡಾಮಣಿಯಲ್ಲಿ ಸಿಗುವ ಮಾಹಿತಿ ಇಂತಿದೆ**

ಯಯಾತಿರಾಜನ ಮಗಳು ಮಾಧವಿ ನೋಡು – ಗಾಲವ (ಭಾರತದ ಆದಿ. ೮೭, ಮತ್ಯ –೨೫, ೪೨) ಪ್ರಸವಿಸಿದ ಕೂಡಲೇ ಮರಳಿ ಕನ್ಯತ್ವ ಬರುವಂತೆ ಮಾಧವಿ ವರವನ್ನು ಋಷಿಯಿಂದ ಪಡೆಯುತ್ತಾಳೆ. ಈಕೆಗೆ ನಾಲ್ವರು ಪುತ್ರರು. ಇಕ್ವಾಕು ವಂಶದ ಹರ್ಯಶ್ವ ರಾಜನಿಂದ ಜನಿಸಿದ ವಸುವಂತನೆಂಬುವ ಮೊದಲನೆಯವ (ಭಾರ ಉ. ೧೧೬) ಕಾಶಿರಾಜನಾದ ದಿವೋದಾಸನಿಂದ ಜನಿಸಿದ ಪ್ರತರ್ದನನೆಂಬುವ ಎರಡನೆಯವ, ಬೋಜ ನಗರಾಧೀಶ್ವರನಾದ ಉಶೀನರನಿಂದ ಜನಿಸಿದ ಶಿಬಿಯೆಂಬವ ಮೂರನೆಯವ (ಭಾರ – ಉ. ೧೧೮), ವಿಶ್ವಾಮಿತ್ರ ಮಹರ್ಷಿಯಿಂದ ಜನಿಸಿದ ಅಷ್ಟಕನೆಂಬವ ನಾಲ್ಕನೆಯವ (ಭಾರ – ಉ – ೧೧೯) ಯಯಾತಿ ಗಂಗಾ ಯಮುನಾ ಸಂಗಮದಲ್ಲಿ ಮಾಧವಿಯ ಸ್ವಯಂವರವನ್ನು ಏರ್ಪಡಿಸುತ್ತಾನೆ. ಮಾಧವಿ ಸಕಲ ರಾಜಪುತ್ರರನ್ನೂ ತಿರಸ್ಕರಿಸಿ ತಪಸ್ಸಿಗಾಗಿ ಅರಣ್ಯಕ್ಕೆ ಹೋದದ್ದು (ಭಾರ – ಉ. ೧೨) ಯಯಾತಿ ಅನೇಕ ಕಾಲ ಸ್ವರ್ಗಸುಖವನ್ನು ಅನುಭವಿಸಿ ಪುಣ್ಯಹೀನನಾಗಿ ಸ್ವರ್ಗದಿಂದ ಚ್ಯುತನಾಗಿ ಭೂಮಿಗೆ ಬಂದು ಅಷ್ಟಕಾದಿ ಮಹರ್ಷಿಗಳೊಂದಿಗೆ ಸಂವಾದ ಮಾಡುತ್ತಿದ್ದಾಗ ಮಾಧವಿ ತನ್ನ ತಂದೆಯ ಬಳಿಗೆ ಬರುತ್ತಾಳೆ(ಭಾರ. ಆದಿ ೮೭).[೫]

ಮೂರನೆಯ ಆಕರವಾಗಿ ಸಾಹಿತ್ಯ ತರಂಗದಲ್ಲಿ ಮತ್ತೊಂದಿಷ್ಟು ಮಾಹಿತಿ ಲಭ್ಯವಾಗುತ್ತದೆ. ಯಯಾತಿ ಚಂದ್ರವಂಶದ ರಾಜನಾದ ನಹುಷನ ಮಗ. ವೇದಪುರಾಣಗಳಲ್ಲಿ ಮತ್ತು ಜಾನಪದದಲ್ಲಿ ಈತನ ಬಗ್ಗೆ ಉಲ್ಲೇಖಗಳಿವೆ. ಇಂದ್ರನಿಂದ ವ್ರತಭಂಗಗೊಂಡ ಯಯಾತಿ ಭೋಗ ಜೀವನದಲ್ಲಿ ಮೈಮರೆತನು. ಒಮ್ಮೆ ಯಯಾತಿ ಅರಣ್ಯ ಮಾರ್ಗದಲ್ಲಿದ್ದಾಗ ಬಾವಿಯ ಆಳದಿಂದ ಆರ್ತಸ್ವರವನ್ನು ಕೇಳಿದನು.

---

೫. ಕೃತಿ – ಪುರಾಣ ಚೂಡಾಮಣಿ, ಸಂಪಾದಕರು: ಬೆನಗಲ್ ರಾಮರಾವ್ ಮತ್ತು ಪಾನ್ಯಂ ಸುಂದರಶಾಸ್ತ್ರಿ; ಪುಟಸಂಖ್ಯೆ – ೪೯೨.

ಬಾವಿಯಲ್ಲಿದ್ದ ಸುಂದರ ಸ್ತ್ರೀಯನ್ನು ಬಲಗೈ ಹಿಡಿದು ಹೊರಬರಲು ಸಹಾಯ ಮಾಡಿದನು. ಆ ಸುಂದರ ಸ್ತ್ರೀ ದೇವಯಾನಿ ಶುಕ್ರಾಚಾರ್ಯರ ಮಗಳು. ಅವಳು ಹೊಳೆಯಲ್ಲಿ ಸ್ನಾನಮಾಡಲು ಗೆಳತಿ ಶರ್ಮಿಷ್ಠೆಯೊಂದಿಗೆ ಬಂದಿದ್ದಳು. ಶರ್ಮಿಷ್ಠೆ ಅಸುರರಾಜನಾದ ವೃಷಪರ್ವನ ಮಗಳು ಅವರಿಬ್ಬರು ಸ್ನಾನ ಮಾಡುವಾಗ ವಾಯುದೇವ ಅವರಿಬ್ಬರ ವಸ್ತ್ರಗಳನ್ನು ಅದಲು ಬದಲು ಮಾಡಿದನು. ಇದರಿಂದ ಅವರಿಬ್ಬರಲ್ಲಿ ಕಲಹ ಪ್ರಾರಂಭವಾಯಿತು. ದೇವಯಾನಿ ಶರ್ಮಿಷ್ಠೆಯನ್ನು ದೂಷಿಸಲು ಶರ್ಮಿಷ್ಠೆ ಕೋಪಗೊಂಡು ದೇವಯಾನಿಯ ಕಪಾಳಕ್ಕೆ ಹೊಡೆದು ಬಾವಿಗೆ ನೂಕಿದಳು. ದೇವಯಾನಿಯನ್ನು ರಕ್ಷಿಸಿ ಯಯಾತಿ ಆಕೆಯನ್ನು ಪಾಣಿಗ್ರಹಣ ಮಾಡಿ ಅರಮನೆಗೆ ಕರೆತಂದನು. ಶರ್ಮಿಷ್ಠೆ ತಾನು ಮಾಡಿದ ತಪ್ಪಿಗೆ ಅರಮನೆಗೆ ದೇವಯಾನಿಯೊಡನೆ ಬಂದು ಅವಳ ದಾಸಿಯಾದಳು. ದೇವಯಾನಿ ಬ್ರಾಹ್ಮಣಳಾದರೂ ಕ್ಷತ್ರಿಯ ರಾಜನನ್ನು ವಿವಾಹವಾಗುವ ಶಾಪವನ್ನು ಹೊಂದಿದ್ದಳು.[೬]

ದೇವಯಾನಿಗೆ ಯಮ ಮತ್ತು ತುರ್ವಸು ಎಂಬ ಮಕ್ಕಳು ಜನಿಸಿದರು. ದೇವಯಾನಿಯ ದಾಸಿಯಾದ ಶರ್ಮಿಷ್ಠೆಗೆ ಯಯಾತಿ ಮಾರುಹೋದನು. ಶರ್ಮಿಷ್ಠೆಗೆ ನಾಲ್ಕು ಜನ ಮಕ್ಕಳು ದ್ರಹ್ಯ, ಅನು, ಪುರು ಎಂಬ ಗಂಡು ಮಕ್ಕಳು ಹಾಗೂ ಮಾಧವಿ ಎಂಬ ಮಗಳು ಇವಿಷ್ಟು ಮಾಧವಿ ಬಗ್ಗೆ ಸಿಗುವ ಮಾಹಿತಿಗಳು. ಪುರಾಣ ವ್ಯಕ್ತಿಯಾದ ಮಾಧವಿಯನ್ನು ಸಮಕಾಲೀನ ಕಣ್ಣುಗಳಿಂದ ನೋಡಲಾಗಿದ್ದು, ಅದು ಹೇಗೆ ವಿಭಿನ್ನ, ವೈಶಿಷ್ಟತೆಗಳಿಂದ ಕೂಡಿದೆ ಎಂಬುದನ್ನು ಸಂಶೋಧಿಸುವುದು ಪ್ರಬಂಧದ ಉದ್ದೇಶವಾಗಿದೆ.

---

೬. ಸಾಹಿತ್ಯ ತರಂಗ, ದ್ವಿತೀಯ ಪಿ.ಯು.ಸಿ. ಪಠ್ಯಪುಸ್ತಕ : ಪುಟಸಂಖ್ಯೆ ೨೦೬.

# ಅಧ್ಯಾಯ ೩

## 'ಮಾಧವಿ' ಕಾದಂಬರಿಕಾರರ ಪರಿಚಯ

**ಹೆಣ್ಣುಮಕ್ಕಳು** ಕಾಲೇಜು ಮೆಟ್ಟಿಲು ಹತ್ತುವುದೇ ಅಪರೂಪವಾದ ದಿನಗಳಲ್ಲಿ ಎಂ.ಬಿ.ಬಿ.ಎಸ್. ಓದಿ ವೈದ್ಯರಾದ ಡಾ. ಅನುಪಮ ನಿರಂಜನ ಅವರು ಜಾತಿಯ ಬಗೆಗೆ ಅತಿ ಮಡಿವಂತಿಕೆ ಇದ್ದ ಆ ದಿನಗಳಲ್ಲಿ ಪ್ರಗತಿಶೀಲ ಲೇಖಕರಾದ ನಿರಂಜನ ಅವರನ್ನು ತಮ್ಮ ಜೀವನ ಸಂಗಾತಿಯನ್ನಾಗಿ ವರಿಸಿದರು. ವೃತ್ತಿಯಿಂದ ವೈದ್ಯೆಯಾಗಿ, ಪ್ರವೃತ್ತಿಯಿಂದ ಲೇಖಕಿಯಾದ ಡಾ. ಅನುಪಮ ನಿರಂಜನ ಅವರು ಈ ಎರಡೂ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ಅಪಾರ.

ಮಹಿಳೆಯರ ಬಗೆಗೆ ಅಪಾರ ಕಾಳಜಿಯನ್ನು ಹೊಂದಿದ್ದ ಡಾ. ಅನುಪಮ ನಿರಂಜನ ಅವರು ಮಹಿಳೆಯರಲ್ಲಿ ಜಾಗೃತಿ ಮೂಡಿಸಿ, ಪಿತೃಪ್ರಧಾನ ಸಮಾಜದಲ್ಲಿ ಮಹಿಳಾ ಬದುಕಿನ ಸ್ವರೂಪ ಹೊಸ ಅರ್ಥವನ್ನು ಪಡೆಯಬೇಕೆಂಬ ಹಂಬಲದಲ್ಲಿ ಲೇಖನಿ ಹಿಡಿದವರು. ತಾಯಿ ಮತ್ತು ಮಗುವಿನ ಆರೋಗ್ಯ, ಮಹಿಳೆಯರು ತಮ್ಮ ಆರೋಗ್ಯವನ್ನು ಕಾಪಾಡುವಲ್ಲಿ ಮುಖ್ಯ ಪಾತ್ರವಹಿಸುವ ವ್ಯಾಯಾಮಗಳ ಮಹತ್ತ್ವ, ಹೊಸದಾಗಿ ಸಾಂಸಾರಿಕ ಜೀವನ ಪ್ರವೇಶಿಸುತ್ತಿರುವ ವಧುವಿಗೆ ಕಿವಿಮಾತು, ದಾಂಪತ್ಯ ದೀಪಿಕೆ, ಸ್ತ್ರೀ ಸ್ವಾಸ್ಥ್ಯ ಸಂಹಿತೆ, ಕಿಶೋರಾವಸ್ಥೆಗೆ ಪ್ರವೇಶಿಸುತ್ತಿರುವ ಹದಿಹರೆಯದ ಹೆಣ್ಣಿಗೆಂದೇ ಕೇಳು ಕಿಶೋರಿ ಹೀಗೆ ಅನುಪಮ ಅವರು ಹೆಣ್ಣಿನ ಬಗೆಗೆ ಸಾಹಿತ್ಯದಾಚೆಗೆ ಸ್ಪಂದಿಸಿದ ಸ್ತ್ರೀವಾದಿಗಳು.

ಡಾ. ಅನುಪಮ ನಿರಂಜನ ಅವರು ಸಾಹತ್ಯ ಕ್ಷೇತ್ರದಲ್ಲಿಯೂ ಸಾಕಷ್ಟು ಸೇವೆಸಲ್ಲಿಸಿದ್ದಾರೆ.

ಅನಂತಗೀತ, ಆಳ, ದಿಟ್ಟೆ, ಶ್ವೇತಾಂಬರಿ, ಸ್ನೇಹಪಲ್ಲವ, ಹೃದಯವಲ್ಲಭ, ಆಕಾಶ ಗಂಗೆ, ಸಸ್ಯಶ್ಯಾಮಲಾ, ಋಣ, ಮೂಡಣ ಪಡುವಣ, ಕಣಿವೆಗೆ ಬಂತು ಬೇಸಗೆ, ಮಾಧವಿ, ಎಳೆ – ಇವೇ ಮೊದಲಾದ ೩೩ ಕಾದಂಬರಿಗಳನ್ನು ಕಣಣಿ, ರೂವಾರಿಯ ಲಕ್ಷ್ಮೀ, ನೀರಿಗೆ ನೈದಿಲೆ ಶೃಂಗಾರ, ಏಳುಸುತ್ತಿನ ಮಲ್ಲಿಗೆ, ಗಿರಿಧಾಮ, ಒಡಲು, ಪುಷ್ಪಕ, ಒಂದು ಗಿಣಿಯ ಕಥೆ, ಇವೇ ಮುಂತಾದ ೯ ಕಥಾಸಂಕಲನಗಳನ್ನು ಬರೆದಿದ್ದಾರೆ.

ನೆನಪು : ಸಿಹಿ–ಕಹಿ, ಬರೆಹಗಾರ್ತಿಯ ಬದುಕು ಎಂಬ ಆತ್ಮಕತೆಗಳನ್ನು ರಚಿಸಿದ್ದಾರೆ. ಇವುಗಳಲ್ಲದೆ ಪ್ರವಾಸ ಕಥನಗಳು, ಶಿಶುಸಾಹಿತ್ಯ, ವೈದ್ಯಕೀಯ ಬರವಣಿಗೆಗಳು, ನಾಟಕ ಕ್ಷೇತ್ರಗಳಿಗೂ ಅತ್ಯಮೂಲ್ಯವಾದ ಕೃತಿಗಳನ್ನು ನೀಡಿದ್ದಾರೆ.

**ಪ್ರಶಸ್ತಿಗಳ ವಿವರ:**

೧೯೭೮ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ

೧೯೭೮ರಲ್ಲಿ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ

೧೯೮೩ರಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ

೧೯೮೭ರಲ್ಲಿ ನಂಜನಗೂಡು ತಿರುಮಲಾಂಬ ಪ್ರಶಸ್ತಿ ಹೀಗೆ ಹತ್ತು ಹಲವು ಪ್ರಶಸ್ತಿ, ಗೌರವ ಸನ್ಮಾನಗಳು ಡಾ. ಅನುಪಮ ನಿರಂಜನ ಅವರ ಪ್ರತಿಭೆಗೆ ಸಂದಿವೆ.

## ಅಧ್ಯಾಯ ೪

## 'ಮಾಧವಿ' ಕಾದಂಬರಿಯ ಕಥಾವಿನ್ಯಾಸ

ಅರಮನೆಯ ಸುಂದರ ಉದ್ಯಾನವನದಲ್ಲಿ ಮೌನವಾಗಿ ವಿಹರಿಸುತ್ತಿದ್ದ ರಾಜಕುಮಾರಿ ಮಾಧವಿಯನ್ನು ಅವಳ ಸಖಿ ಚಾರುನೇತ್ರಾ ಮಾತಿಗೆಳೆಯುವ ಮೂಲಕ ಕಾದಂಬರಿ ಆರಂಭವಾಗುತ್ತದೆ. ಮಾಧವಿಯ ಈ ಮೌನಕ್ಕೆ ಕಾರಣ ತಂದೆ ಯಯಾತಿ ಮಹಾರಾಜ ಏರ್ಪಡಿಸಲಿದ್ದ 'ಸ್ವಯಂವರ'ವಾಗಿತ್ತು.

ಹೆಣ್ಣಾಗಿ ಹುಟ್ಟಿ ತಂದೆಯ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಮಾಧವಿ ತಾಯಿಯನ್ನೂ ಕಳೆದುಕೊಂಡು ಅಪಶಕುನದ ಮುದ್ದೆಯಾಗಿದ್ದಳು. ತಂದೆ, ತಾಯಿ ಎರಡೂ ಆಗಿ ಮಾಧವಿಯನ್ನು ಸಾಕಿ ಸಲುಹಿದವಳು ಅರಮನೆಯ ದಾಸಿ ಯೌವನಕ್ಕೆ ಬಂದ ಮಾಧವಿ ಚೆಲುವಿನ ಸಿರಿಯಂತಿದ್ದಳು. ಅವಳಿಗೆ ಏರ್ಪಡಿಸಲಿದ್ದ ಸ್ವಯಂವರದ ಸುದ್ದಿ ಅರಮನೆಯನ್ನೆಲ್ಲಾ ವ್ಯಾಪಿಸಿತ್ತು.

ತಾನು ವರಿಸಲಿರುವ ರಾಜಕುಮಾರನ ಬಗ್ಗೆ ಸುಂದರ ಕನಸುಗಳನ್ನು ಕಾಣುತ್ತಿದ್ದ ಮಾಧವಿಗೆ ವಿಶ್ವಾಮಿತ್ರನ ಶಿಷ್ಯ ಗಾಲವನ ಆಗಮನ ಅವಳ ಕನಸುಗಳನ್ನು ಭಗ್ನಗೊಳಿಸುವ ಮೂಲಕ ಅವಳ ಇಡೀ ಬದುಕನ್ನೆ ನುಂಗುತ್ತದೆ.

ವಿಶ್ವಾಮಿತ್ರನಲ್ಲಿ ಶಿಷ್ಯವೃತ್ತಿಯನ್ನು ಆರಂಭಿಸಿದ ಗಾಲವ ಶುಕ್ಲಯಜುರ್ವೇದ ವಿದ್ಯೆಯಲ್ಲಿ ಪಂಡಿತನಾಗುತ್ತಾನೆ. ಗುರುಕುಲವನ್ನು ಬಿಡುವ ಸಮಯದಲ್ಲಿ 'ಗುರುದಕ್ಷಿಣೆ ಕೊಟ್ಟ ಹೊರತು ಅಧ್ಯಯನದ ಸಿದ್ಧಿ ಲಭಿಸುವುದಿಲ್ಲ' ಎಂಬ ಹಿರಿಯರ ಮಾತನ್ನು ಸ್ಮರಿಸಿ, ವಿಶ್ವಾಮಿತ್ರನನ್ನು ಕುರಿತು; ಗುರುಗಳೇ ನಾನು ಏನು ಗುರುದಕ್ಷಿಣೆ ಕೊಡಬೇಕೆಂದು ಕೇಳುತ್ತಾನೆ. ವಿಶ್ವಾಮಿತ್ರನು, ನಿನ್ನ ಸೇವೆಯಿಂದ ನಾನು ತೃಪ್ತಿ-ಹೊಂದಿರುವುದಾಗಿಯೂ ನಿನ್ನಿಂದ ಯಾವುದೇ ಗುರುದಕ್ಷಿಣೆ ಬೇಡವೆಂದು ಹೇಳುತ್ತಾನೆ. ಗುರುದಕ್ಷಿಣೆಯ ಮಾತು ಇಲ್ಲಿಗೆ ನಿಂತಿದ್ದರೆ ಮಾಧವಿಯ ಬಾಳಿನಲ್ಲಿ ಗಾಲವನ ಆಗಮನವಾಗುತ್ತಿರಲಿಲ್ಲ. ಆದರೆ ಗಾಲವ ಗುರುದಕ್ಷಿಣೆಯನ್ನು ನಾನು ನಿಮಗೆ ಕೊಡಲೇಬೇಕೆಂದು ನೀವು ಏನು ಕೊಡಬೇಕೆಂದು ಅಪ್ಪಣೆ ಮಾಡಬೇಕೆಂದು ಹಠವಿಡಿದು ಕುಳಿತಾಗ ವಿಶ್ವಾಮಿತ್ರ ಗಾಲವನ ಉದ್ಧಟತನಕ್ಕೆ ಸಿಟ್ಟಾಗಿ ಅಸಾಧ್ಯವಾದುದನ್ನು ಕೇಳಿ ಇಲ್ಲ ಎಂದೆನಿಸಿಕೊಳ್ಳಬೇಕೆಂದು "ಮೈಯೆಲ್ಲ ಬೆಳ್ಳಗೂ ಒಂದು ಕಿವಿ ಮಾತ್ರ ಕಪ್ಪಾಗಿಯೂ ಇರುವ ಎಂಟುನೂರು ಕುದುರೆಗಳನ್ನು ತಂದುಕೊಡೆಂದು" ಹೇಳುತ್ತಾನೆ.

ಭರಿಸಲಾಗದಂತ ಗುರುಕಾಣಿಕೆಯನ್ನು ಕೇಳಿ ದಿಗ್ಭ್ರಮೆಗೊಂಡ ಗಾಲವ ಗುರುಕಾಣಿಕೆಯನ್ನು ತಂದು ಕೊಡುವುದಾಗಿ ಹೇಳಿ ಅಪ್ಪಣೆಪಡೆದು ಗುರುಕುಲವನ್ನು

ಬಿಡುತ್ತಾನೆ. ಗುರುಗಳು ಕೇಳಿರುವ ಈ ಅಸಾಧ್ಯವಾದ ಗುರುಕಾಣಿಕೆಯನ್ನು ಸಲ್ಲಿಸಿದ ಹೊರತು ನನಗೆ ಮುಕ್ತಿ ಸಿಗುವುದಿಲ್ಲವೆಂದು ಮನಗಂಡ ಗಾಲವ ಗುರುದಕ್ಷಿಣೆಯನ್ನು ಹೇಗಾದರೂ, ಎಂಥಾದರೂ ಸರಿ ಸಂಪಾದಿಸಬೇಕೆಂದು ಪಣತೊಡುತ್ತಾನೆ. ಇದರ ಪರಿಣಾಮವಾಗಿ ಮಾಧವಿಯ ಜೀವನ ಹಲವು ತಿರುವುಗಳನ್ನು ಪಡೆದು ನರಕ ಸದೃಶ್ಯವಾಗುತ್ತದೆ.

ಗಾಲವನಿಗೆ ಗುರುತ್ಮಂತ ಮುನಿಯ ದರ್ಶನವಾಗಿ ತನ್ನ ಚಿಂತನೆಯನ್ನು ಹೇಳಲು, ಗುರುತ್ಮಂತ ಇಂಥ ವಿಶಿಷ್ಟ ಕುದುರೆಗಳು ಯಯಾತಿಯ ಬಳಿ ಸಿಗುವವೆಂದು, ಅವನು ಕೊಡುಗೈ ವೀರನೆಂದು ಹೇಳಿ ಯಯಾತಿಯ ಹೆಸರನ್ನು ಸೂಚಿಸುತ್ತಾನೆ.

ಗಂಗಾ – ಯಮುನಾ ಸಂಗಮ ಸ್ಥಳದಲ್ಲಿದ್ದ ಪ್ರತಿಷ್ಠಾನ ನಗರದಲ್ಲಿ ಆಳ್ವಿಕೆ ನಡೆಸುತ್ತಿದ್ದ ಯಯಾತಿ ಶೂರನೂ, ಧರ್ಮಿಷ್ಠನೂ ಆಗಿದ್ದನು. ಯಜ್ಞಯಾಗಾದಿಗಳಿಗೆ ಪ್ರಸಿದ್ಧಿಹೊಂದಿದ ಇವನ ರಾಜ್ಯಭಾರದಲ್ಲಿ ಅಲ್ಲಿನ ಪ್ರಜೆಗಳು ನಿತ್ಯ ಸಂತುಷ್ಟರಾಗಿ ಸುಖ ಜೀವನವನ್ನು ನಡೆಸುತ್ತಿದ್ದರು. ಅಲ್ಲದೆ ಬಯಸಿ ಬಂದವರಿಗೆ ಬಯಸಿದ್ದನ್ನು ಕೊಡುವ ದಾನಿಯೂ ಆಗಿದ್ದನು.

ಗುರುದಕ್ಷಿಣೆಯನ್ನು ಸಂಪಾದಿಸಲು ಯಯಾತಿಯ ಅರಮನೆಗೆ ಬಂದ ಗಾಲವನು ಮಹಾರಾಜನ ಆತಿಥ್ಯವನ್ನು ಸ್ವೀಕರಿಸಿದ ಬಳಿಕ ತಾನು ವಿಶ್ವಾಮಿತ್ರನ ಶಿಷ್ಯನೆಂದೂ ಗುರುಗಳು ಕೇಳಿರುವ ಗುರುದಕ್ಷಿಣೆಯ ಸಂಪಾದನೆಗಾಗಿ ಬಂದಿರು-ವುದಾಗಿಯೂ ಹೇಳುತ್ತಾನೆ. "ಮೈಯೆಲ್ಲ ಬೆಳ್ಳಗೂ ಒಂದು ಕಿವಿ ಮಾತ್ರ ಕಪ್ಪಾಗಿಯೂ ಇರುವ ಎಂಟುನೂರು ಕುದುರೆಗಳನ್ನು ಕೊಡು ಎಂದು ಅದು ಸಾಧ್ಯವಾಗದಿದ್ದಲ್ಲಿ ಅಶ್ವಗಳನ್ನು ಕೊಂಡುಕೊಳ್ಳಲು ಅಗತ್ಯವಾದ ಧನಕನಕದ ಸಹಾಯವನ್ನಾದರೂ ಮಾಡು" ಎಂದು ರಾಜನಲ್ಲಿ ಕೇಳಿಕೊಳ್ಳುತ್ತಾನೆ.

ಯಜ್ಞಯಾಗಾದಿಗಳನ್ನು ಮಾಡಿ, ಧನಕನಕದ ಭಂಡಾರವು ಖಾಲಿ-ಯಾಗಿದುದ್ದರಿಂದ ಯಯಾತಿ ಚಿಂತೆಗೊಳಗಾಗುತ್ತಾನೆ. ಗಾಲವ ತನ್ನ ಸ್ವಂತ ಸುಖಕ್ಕಾಗಿ ಗುರುದಕ್ಷಿಣೆಯನ್ನು ಕೇಳುತ್ತಿಲ್ಲ, ಗುರುದಕ್ಷಿಣೆಯನ್ನು ಸತ್ಕಾರ್ಯಕ್ಕಾಗಿ ವಿನಿಯೋಗಿಸಲು ಕೇಳಿ ಬಂದಿದ್ದಾನೆ. ಬೇಡಿ ಬಂದವರಿಗೆ ಬೇಡಿದನ್ನು ಕೊಡದಿದ್ದರೆ ನನ್ನ ಕ್ಷತ್ರಿಯ ಧರ್ಮಕ್ಕೆ ಅವಮಾನ. ಭಿಕ್ಷಾರ್ಥಿಯಾಗಿ ಬಂದ ಬ್ರಾಹ್ಮಣನನ್ನು ಬರಿಗೈಲಿ ಕಳಿಸಿದರೆ ವಂಶಕ್ಕೆ ಕಳಂಕ ಏನು ಮಾಡುವುದೆಂದು ಧರ್ಮ ಸಂಕಟಕ್ಕೆ ಸಿಲುಕಿದ ಯಯಾತಿಗೆ ಕಣ್ಮುಂದೆ ಬಂದದ್ದು ಅಪೂರ್ವ ಲಾವಣ್ಯವತಿಯಾದ ಮಗಳ ಸೌಂದರ್ಯ ಮಾಧವಿಯಿಂದ ನನಗಾವ ಪ್ರಯೋಜನವೂ ಇಲ್ಲ ಅವಳನ್ನು ದಾನಕೊಟ್ಟರೆ ಪ್ರಶ್ನಿಸಲು ಅವಳ ತಾಯಿಯೂ ಇಲ್ಲ. ಗಾಲವನಿಗೆ ಮಾಧವಿಯನ್ನು ದಾನ ಮಾಡಿದರೆ ಪ್ರಜೆಗಳು ನನ್ನನ್ನು ದಾನಶೂರ ಎನ್ನುತ್ತಾರೆ ಎಂದು ನಿರ್ಧರಿಸಿ

ಮಹಾರಾಣಿ ದೇವಯಾನಿಯ ಸಮ್ಮತಿಯನ್ನು ಪಡೆದು ಮಾಧವಿಯನ್ನು ಗಾಲವನಿಗೆ ದಾನಕೊಡಲು ಮುಂದಾಗುತ್ತದೆ.

"ಮುನಿಶ್ರೇಷ್ಠರೇ, ಯಾಗ ಇಷ್ಟಗಳಿಂದಾಗಿ ನನ್ನ ಭಂಡಾರ ಖಾಲಿಯಾಗಿದೆ. ಆದರೆ ನಿಮ್ಮನ್ನು ಬರಿಗೈಯಿಂದ ಕಳಿಸುವುದು ಧರ್ಮವಲ್ಲ. ನನಗೆ ಸರ್ವಾಂಗ ಸುಂದರಿಯೂ, ಸಕಲ ವಿದ್ಯಾ ಸಂಪನ್ನಳು ಆದ ಮಗಳೊಬ್ಬಳಿದ್ದಾಳೆ. ಅವಳ ಹೆಸರು ಮಾಧವಿ. ಅವಳನ್ನು ನಿಮ್ಮ ವಶಕ್ಕೆ ಕೊಡುತ್ತೇನೆ. ದೇವ ಅಪ್ಸರ ಗಂಧರ್ವರಿಗೆ ಮಿಗಿಲಾದ ಸೌಂದರ್ಯವುಳ್ಳ ಮಾಧವಿಯನ್ನು ಯಾರಿಗಾದರೂ ಪುಣ್ಯಾತ್ಮರಾಜನಿಗೆ ಕೊಟ್ಟು ನಿಮ್ಮ ಗುರುದಕ್ಷಿಣೆಗೆ ಬೇಕಾದ ಅಶ್ವಗಳನ್ನು ಕನ್ಯಾಶುಲ್ಕ ರೂಪದಲ್ಲಿ ದೊರಕಿಸಿಕೊಳ್ಳಬೇಕೆಂದು" ಹೇಳುತ್ತಾನೆ. ಮಾಧವಿಯನ್ನು ದಾನವಾಗಿ ಪಡೆದುಕೊಳ್ಳಲು ಹಿಂದುಮುಂದು ನೋಡಿದ ಗಾಲವ ಅವಳ ಅಪೂರ್ವ ಸೌಂದರ್ಯಕ್ಕೆ ಮರುಳಾಗಿ ದಾನವಾಗಿ ಅವಳನ್ನು ಪಡೆದುಕೊಳ್ಳಲು ಮುಂದಾಗುತ್ತಾನೆ.

ವಿಪರ್ಯಾಸವೆಂದರೆ ಮಾಧವಿಯ ಮಲತಾಯಿ ದೇವಯಾನಿ ಈ ದಾನಕ್ಕೆ ಸಮ್ಮತಿಯನ್ನು ಸೂಚಿಸಿದ್ದು. ಈ ಘೋರ ವಿಷಯವನ್ನು ಕೇಳಿದ ಮಾಧವಿ ದಿಗ್ಭ್ರಮೆಗೊಳಗಾಗುತ್ತಾಳೆ. ಕೊನೆಗೆ ತಂದೆಯೇ ನನ್ನನ್ನು ದಾನನೀಡಿರುವಾಗ, ಮಲತಾಯಿ ಇದಕ್ಕೆ ಒಪ್ಪಿಗೆ ನೀಡಿರುವಾಗ ನನ್ನ ಆಕ್ರಂದನಕ್ಕೆ ಬೆಲೆ ಕೊಡುವವರು ಯಾರು? ಯಾರಿಗೂ ಬೇಡವಾದ ನಾನು ಗಾಲವನೊಂದಿಗೆ ಹೋಗುವುದೇ ಸರಿಯೆಂದು ನಿಶ್ಚಯಿಸಿ ಹೊರಡುತ್ತಾಳೆ.

ಹೀಗೆ ತನ್ನ ಸುಂದರ ಕನಸಿಗೆ ತಿಲಾಂಜಲಿ ಇಟ್ಟು ಯಾರದೋ ಗುರುಕಾಣಿಕೆಯ ಸಂಪಾದನೆಗೆ ಸಾಧನವಾಗಿ, ತಂದೆಯ ವಚನಪಾಲನೆಗಾಗಿ ಹೊರಟ ಮಾಧವಿಗಾಗಿ ಮರುಗಿದವರು ಮಾಧವಿಯನ್ನು ಸಾಕಿದ ಅವ್ವೆ ಮತ್ತವಳ ಸಖಿಯರು ಮಾತ್ರ. ಆದರೆ ಅವರೆಲ್ಲಾ ನಿಸ್ಸಹಾಯಕರು!

ಏಕಪತ್ನಿವ್ರತನಾಗಿರಬೇಕು ತನ್ನನ್ನಲ್ಲದೆ ಬೇರೆಯಾವ ಸ್ತ್ರೀಯರನ್ನು ಕಣ್ಣೆತ್ತಿಯೂ ನೋಡಬಾರದೆಂದು ತನ್ನ ಸಖಿಯೊಂದಿಗೆ ಹೇಳಿದ್ದ ಮಾಧವಿ ಬದುಕು ಹೇಳತೀರದ ರೀತಿಯಲ್ಲಿ ಹರಿದುಹಂಚಿ ಹೋಗುತ್ತದೆ.

ತನ್ನ ಕಾರ್ಯಸಿದ್ಧಿಗಾಗಿ, ತನ್ನ ಮೋಕ್ಷಸಿದ್ಧಿಗಾಗಿ ಗುರುಕಾಣಿಕೆಯನ್ನು ಸಂಪಾದಿಸಲು ಮಾಧವಿಯನ್ನು ಮುಂದಿಟ್ಟುಕೊಂಡು ಹೊರಟ ಗಾಲವನಿಗೆ 'ಮೈಯೆಲ್ಲಾ ಬೆಳ್ಳಗಿರುವ ಒಂದು ಕಿವಿ ಮಾತ್ರವೆ ಕಪ್ಪಾಗಿರುವ ಎಂಟುನೂರು ಅಶ್ವಗಳು' ಒಂದೇ ಕಡೆ ಸಿಗುವುದಿಲ್ಲ. ಈ ಲಕ್ಷಣಗಳುಳ್ಳ ಅಶ್ವಗಳು ಎಲ್ಲಿ ಸಿಗುತ್ತವೋ ಅಲ್ಲಿ ಮಾಧವಿಯನ್ನು ದಾನವಾಗಿ ಒಂದು ವರ್ಷದ ಅವಧಿಗೆ ನೀಡಲು ಮುಂದಾಗುತ್ತಾನೆ. ಅದರಂತೆ

ಮಾಧವಿ ಅಯೋಧ್ಯಾ ದೊರೆ ಹರ್ಯಶ್ವ, ಕಾಶಿರಾಜ ದಿವೋದಾಸ ಭೋಜದೇಶಾಧಿಪತಿ ಊಶೀನರ ಇವರೆಲ್ಲರ ಬಳಿ ಇದ್ದು ಕ್ರಮವಾಗಿ ವಸುವಂತ, ಪ್ರತರ್ಧನ, ಶಿಬಿ ಎಂಬ ಗಂಡು ಮಕ್ಕಳನ್ನು ಹೆತ್ತುಕೊಡುತ್ತಾಳೆ. ಆ ಮಕ್ಕಳಿಗೆ ಹಾಲುಣಿಸುವ ಅವಕಾಶವೂ ಅವಳಿಗೆ ಇರುವುದಿಲ್ಲ. ಗಾಲವ ದಾನದ ಅವಧಿ ಮುಗಿಯುತ್ತಿದ್ದಂತೆ ಮಾಧವಿಯನ್ನು ಬೇರೆ ರಾಜರಿಗೆ ಕೊಡುತ್ತಿದ್ದನು. ಆ ನೋವು, ಆ ಅವಮಾನ, ಪುರುಷ ಸಮಾಜದ ಬಗ್ಗೆ ತಿರಸ್ಕಾರ ಎಲ್ಲವೂ ಒಮ್ಮೆಲೆ ಮೂಡಿದರೂ ಏನು ಮಾಡಲಾಗದ ಅಸಹಾಯಕ ಸ್ಥಿತಿಯನ್ನು ಮಾಧವಿ ಹೊಂದುತ್ತಾಳೆ. ಸಾಯಲು ಅಂಜಿಕೆಯಾಗಿ, ಬದುಕಲು ಹೇಸಿಗೆಯಾಗಿ ಉಸಿರಾಡುತ್ತಾಳೆ. ಮನಸ್ಸಿಲ್ಲದ ಮನಸ್ಸಿನಿಂದ ಪ್ರೀತಿಯೇ ಬಾರದ ನಿಲುವಿನಿಂದ ತನ್ನ ದೇಹವನ್ನು ಅರ್ಪಿಸುವ, ಮಗುವನ್ನು ಹೆರುವ ಯಂತ್ರವಾಳುತ್ತಾಳೆ.

ಇವಳಿಂದ ಯಥೇಚ್ಛವಾಗಿ ಕಾಮಸುಖವನ್ನು ಪಡೆದ ಮಹಾರಾಜರುಗಳು ಅವಧಿ ಮುಗಿದ ತಕ್ಷಣವೇ ಯಾವುದೇ ವ್ಯಾಕುಲಕ್ಕೂ ಒಳಗಾಗದೆ ಮಾಧವಿಯನ್ನು ಗಾಲವನಿಗೆ ಒಪ್ಪಿಸಲು ಮುಂದಾಗುತ್ತಾರೆ. ತಮ್ಮನ್ನು ತಾವು ಧರ್ಮಸೆರೆಯಿಂದ ಬಿಡಿಸಿಕೊಳ್ಳುತ್ತಾರೆ. ಪಶುವಿಗಿಂತ ಹೆಚ್ಚಾಗಿ ಮಾಧವಿಯೊಂದಿಗೆ ವರ್ತಿಸುತ್ತಾರೆ.

ಯಯಾತಿಯಿಂದ ಮಾಧವಿಯನ್ನು ದಾನವಾಗಿ ಪಡೆದ ಗಾಲವ ಕೂಡ ಮಾಧವಿಗೆ ತನ್ನಿಂದ ಆಗುತ್ತಿರುವ ಅನ್ಯಾಯಕ್ಕೆ ದುಃಖಿಸುವುದಿಲ್ಲ. ಅವನ ಮುಖ್ಯ ಉದ್ದೇಶ ಗುರುಕಾಣಿಕೆಯನ್ನು ಒಪ್ಪಿಸಿ ಋಣಮುಕ್ತನಾಗುವುದೇ ಆಗಿತ್ತು. ಮಾಧವಿಯ ಆಸೆ, ಆಕಾಂಕ್ಷೆ, ಅವಳ ಮನಸ್ಸಿನ ಸ್ಥಿತಿಯನ್ನು ಅರಿಯಲು ಮುಂದಾಗುವುದೇ ಇಲ್ಲ. ಅವರುಗಳ ಪಾಲಿಗೆ ಮಾಧವಿ ಕಾಮದಾಸೆಯನ್ನು ಪೂರೈಸುವ ಜೀವವಷ್ಟೆ ಆದಳು.

ಆರುನೂರು ಅಶ್ವಗಳನ್ನು ಸಂಪಾದಿಸಿದ ಗಾಲವನಿಗೆ ಎಲ್ಲಿ ಎಷ್ಟೇ ಹುಡುಕಿದರೂ ಉಳಿದ ಇನ್ನೂರು ಕುದುರೆಗಳು ಸಿಗುವುದಿಲ್ಲ. ಕೊನೆಗೆ ಉಳಿದ ಇನ್ನೂರು ಕುದುರೆಗಳಿಗೆ ಬದಲಾಗಿ ಮಾಧವಿಯನ್ನು ವಿಶ್ವಾಮಿತ್ರನಿಗೆ ಒಪ್ಪಿಸುತ್ತಾನೆ. ಮಾಧವಿ-ಯನ್ನು ಕಂಡ ವಿಶ್ವಾಮಿತ್ರ ಅವಳಿಗಾಗಿರುವ ಅನ್ಯಾಯವನ್ನು ಕುರಿತು ಯೋಚಿಸುವುದಿಲ್ಲ, ರಾಜಕುಮಾರಿಯಾಗಿದ್ದು ಅವಳಿಗೊದಗಿದ ಸ್ಥಿತಿಗಾಗಿ ದುಃಖಿಸುವುದೂ ಇಲ್ಲ ಬದಲಾಗಿ "ಎಂಟುನೂರು ಅಶ್ವಗಳಿಗೆ ಬದಲಾಗಿ ಈ ಮಾಧವಿಯನ್ನು ಸ್ವೀಕರಿಸಿ ಅಂತ ಹೇಳಿ ಇವಳನ್ನು ನನ್ನಲ್ಲಿ ತಂದು ಬಿಟ್ಟಿದ್ದರೆ ಎಷ್ಟು ಚೆನ್ನಾಗಿತ್ತು. ನಾನೇ ಇವಳನ್ನು ಜೀವಮಾನಪರ್ಯಂತ ಭೋಗಿಸಿ ಜಗತ್ತಿಗೆ ಶ್ರೇಷ್ಠರಾದ ನಾಲ್ವರು ಪುತ್ರರನ್ನು ಪಡೀತಿದ್ದೆ ಇರಲಿ ಆದದ್ದಾಗಿ ಹೋಯ್ತು ಇವಳಲ್ಲಿ ಒಬ್ಬನೇ ಮಗನನ್ನು ಪಡೆದು ಆನಂತರ ಮಾಧವಿಯನ್ನು ನಿನಗೆ ಒಪ್ಪಿಸಿ ಬಿಡ್ತೀನಿ" ಎನ್ನುತ್ತಾನೆ. ಅದರಂತೆ ಮಾಧವಿಯಿಂದ 'ಅಷ್ಟಕ'ವೆಂಬ ಗಂಡುಮಗನನ್ನು ಪಡೆಯುತ್ತಾನೆ.

ನಾಲ್ಕು ವರ್ಷಗಳವರೆಗೆ ಗುರುದಕ್ಷಿಣೆಗಾಗಿ ಮಾಧವಿಯ ಬಾಳನ್ನು ನರಕ ಮಾಡಿದ ಗಾಲವ "ಮಾಧವಿ ನೀನು ಮೂರು ಜನ ರಾಜರ್ಷಿಗಳಿಂದಲೂ ಓರ್ವ ಬ್ರಹ್ಮರ್ಷಿಯಿಂದಲೂ ಸಂಸಾರ ಸುಖವನ್ನುಂಡು ನಾಲ್ಕು ಪುತ್ರರನ್ನು ಪಡೆದು ಇನ್ನು ಕನ್ಯೆಯಂತೆಯೇ ಇದ್ದೀಯ ನನ್ನನ್ನೂ ಸಹ ಗುರುದಕ್ಷಿಣೆಯ ಭಾರದಿಂದ ಮುಕ್ತನನ್ನಾಗಿ ಮಾಡಿದೆ. ನಿನಗೆ ಅಖಂಡವಾದ ಕೀರ್ತಿ ಬರಲಿ, ನಿನಗೆ ಶುಭವಾಗಲಿ' ಎಂದು ಆಶೀರ್ವಾದಿಸುತ್ತಾನೆ!" ಈ ಮಾತಿನಿಂದ ಕೆರಳಿದ ಮಾಧವಿ 'ನಿಮ್ಮ ಆಶೀರ್ವಾದಕ್ಕೆ ಅರ್ಥವಾದರೂ ಏನಿದೆ? ನನ್ನ ಬಾಳು ಚೂರುಚೂರಾಗುವ ಹಾಗೆ ಮಾಡಿದೋರು ನೀವು. ಗುರುದಕ್ಷೀಣೇನ ನೀವು ಕೊಡದಿದ್ರೆ ಏನಾಗುತ್ತಿತ್ತು' ಎಂದು ಪ್ರಶ್ನಿಸುತ್ತಾಳೆ. "ಗುರುದಕ್ಷಿಣೆ ಸಲ್ಲಿಸಿದ ಹೊರ್ತು ವಿದ್ಯೆಗೆ ಸಿದ್ದಿಲಭಿಸೋದಿಲ್ಲ ಅನ್ನೋದು ಗೊತ್ತಿಲ್ವ ನಿಂಗೆ?" ಎಂದು ಗಾಲವ ಕೇಳಿದಾಗ ನಿಮ್ಮ ಕುದುರೆಗಳಿಗಾದ ಗತಿ ಗೊತ್ತಿದೆಯಾ ನಿಮಗೆ?"



'ಕೋಡೋದು ನನ್ನ ಧರ್ಮ, ಅವುಗಳ ಗತಿ ನನ್ನ ಜವಾಬ್ದಾರಿಯಲ್ಲ" ಎಂದು ಗಾಲವ ಮಾಧವಿಯ ಪ್ರಶ್ನೆಗೆ ಉತ್ತರಿಸುತ್ತಾನೆ.

"ಒಬ್ಬ ಹೆಣ್ಣು ಮಗಳ್ನ ಯಾಕೆ ಇಂಥ ಚಿತ್ರಹಿಂಸೆಗೆ ಗುರಿ ಮಾಡಿದ್ರಿ? ನನ್ನನ್ನು ಅಯ್ಯೋ ಅನಿಸಿದಕ್ಕೆ ಪ್ರಪಂಚದ ಯಾವ ಹೆಂಗಸೂ ಯಾವ ಕಾಲಕ್ಕೂ ನಿಮ್ಮನ್ನೂ ಕ್ಷಮಿಸೋಲ್ಲ!" ಎಂದಾಗ ಗಾವಲನ ಮನಸ್ಸಿನಲ್ಲಿ ಮಾಧವಿಶಾಪ ಕೊಟ್ಟರೆ ಎಂಬ ಭಯ ಮೂಡಿದರೂ ಅಂಥ ತಪಸ್ಸಿನ ಶಕ್ತಿ ಮಾಧವಿಗಿಲ್ಲವೆಂದೇ ನೆನೆಯುತ್ತಾನೆ! ಆದರೆ ವಿಶ್ವಾಮಿತ್ರನ ಮಡದಿಯಾಗಿದ್ದರಿಂದ ಶಾಪಕೊಟ್ಟರೆ ಎಂಬ ಭಯವೂ ಅವನಲ್ಲಿ ಇರುತ್ತದೆ.

ತನ್ನ ಕೆಲಸ ಮುಗಿದ ಮೇಲೆ ಗಾಲವ ಮಾಧವಿಯನ್ನು ಯಯಾತಿಗೆ ತಂದು ಒಪ್ಪಿಸುತ್ತಾನೆ. ವಸ್ತುಸ್ಥಿತಿಯನ್ನು ತಿಳಿದ ಯಯಾತಿ ಗಾಲವನ ಮೇಲೆ ಸಿಟ್ಟಿಗೆದ್ದರೂ, ಗಾಲವ ಇದರಲ್ಲಿ ನೀನು ಸಹ ಪಾಲುದಾರ ಎಂದು ಹೇಳಿದಾಗ ಸುಮ್ಮನಾಗುತ್ತಾನೆ. ಆದರೆ ತನ್ನ ಮೇಲೆ ಬರಬಹುದಾದ 'ಪಾಪ' ಪರಿಹಾರಕ್ಕೆ ಅವಳಿಗೆ ಸ್ವಯಂವರವನ್ನು ಏರ್ಪಡಿಸುತ್ತಾನೆ. ತನ್ನೆಲ್ಲ ದುಃಖಕ್ಕೂ ಮೂಲ ಕಾರಣನಾದ ತಂದೆಯನ್ನು ಕ್ಷಮಿಸುತ್ತಾಳೆ. ಮನುಷ್ಯನ ದಬ್ಬಾಳಿಕೆಯ ಬಗ್ಗೆ ತೀವ್ರ ತಿರಸ್ಕಾರ ಮೂಡಿದ್ದ ಮಾಧವಿ ಅವರೆಲ್ಲರಿಂದ ದೂರ ಹೊರಟು ಹೋಗುತ್ತಾಳೆ.

## ಆ) ಡಾ. ಅನುಪಮ ನಿರಂಜನ ಅವರ ಮಾಧವಿ

ಕಾದಂಬರಿಯ ಕೇಂದ್ರವಾದ 'ಮಾಧವಿ' ಓದುಗರ ಗಮನವನ್ನು ಸೆಳೆಯುತ್ತಾಳೆ ಮಾತ್ರವಲ್ಲ ಶೋಷಿತ ಹೆಣ್ಣಿನ ಸಂಕೇತವಾಗಿ ಕಣ್ಮುಂದೆ ನಿಲ್ಲುತ್ತಾಳೆ. ಅಂದಿನ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ಬಗೆಗೆ ಹೊಂದಿದ್ದ ನಿಲುವು, ಧೋರಣೆಗಳನ್ನು ಹೇಳುತ್ತಾ ಅವುಗಳನ್ನು ಸಮಕಾಲೀನ ಕಣ್ಣುಗಳಿಂದ ಕಂಡಿರುವುದು ಕಾದಂಬರಿಯ ವಿಶೇಷ.

ತಂದೆಯ ಪ್ರೀತಿ ಇಲ್ಲದೆ, ಚಿಕ್ಕಮ್ಮನ ಅಭಿಮಾನವೂ ಇಲ್ಲದೆ ದಾಸಿಯ ಆರೈಕೆಯಲ್ಲಿ ಬೆಳೆದ ಮಾಧವಿ ರಾಜಕುಮಾರಿಯಾದರೂ ಹಲವು ಕಷ್ಟಗಳಿಗೆ ಗುರಿಯಾಗುತ್ತಾಳೆ. ತಂದೆಯೂ ಸೇರಿದಂತೆ ಹಲವು ಪುರುಷರಿಂದ, ರಾಣಿವಾಸದ ಸ್ತ್ರೀಯರಿಂದ ನಿರಂತರ ಶೋಷಣೆಗೊಳಗಾಗುತ್ತಾಳೆ. ತನಗಾಗುತ್ತಿರುವ ಅಪಮಾನ, ಅನ್ಯಾಯದ ವಿರುದ್ಧ ಪ್ರತಿಭಟಿಸುತ್ತಾಳಾದರೂ ಅಸಹಾಯಕಳಾಗುತ್ತಾಳೆ.

'ನನ್ನ ರಾಜಕುಮಾರ ಸುಂದರನಾಗಿರಬೇಕು, ಸುಕುಮಾರನಾಗಿರಬೇಕು, ಉದಾರಿಯೂ, ವಿನಯವಂತನೂ ಆಗಿರಬೇಕೆಂದು ಕನಸು ಕಾಣುವ ಮಾಧವಿಗೆ ಅವಳ ರಾಜಕುಮಾರ ಏಕಪತ್ನೀವ್ರತನಾಗಿರಬೇಕೆಂಬುದು ಮಹಾದಾಸೆ' ಈ ವಿಚಾರವಾಗಿ ಅವಳ ಸಖಿ ಚಾರುನೇತ್ರ 'ರಾಜನೆಂದರೆ ಸಾವಿರ ಹೆಂಗಸಿನ ಸರದಾರ' ಹೀಗಿರುವಾಗ ನಿನ್ನ ರಾಜಕುಮಾರ ಏಕಪತ್ನೀವ್ರತನಾಗಿರಬೇಕೆಂದು ಹೇಳುವೆಯಲ್ಲ ಎಂದು ಛೇಡಿಸಿದಾಗ 'ಊಹೂಂ ನನ್ನ ರಾಜಕುಮಾರ ಹಾಗಲ್ಲ' ಎಂದು ಹೇಳುವ ಮಾಧವಿ ಮುಗ್ಧ ಮನಸ್ಸಿನವಳು.

ಗುರುಕಾಣಿಕೆಯನ್ನು ಕೊಟ್ಟ ಹೊರತು ಕಲಿತ ವಿದ್ಯೆ ಸಿದ್ಧಿಸುವುದಿಲ್ಲವೆಂದು ನಂಬಿ ಗುರುವಿನಿಂದ ಅಪ್ಪಣೆಯಾದ "ಮೈಯೆಲ್ಲಾ ಬೆಳ್ಳಗಿರುವ ಒಂದು ಕಿವಿ ಮಾತ್ರವೇ ಕಪ್ಪಾಗಿರುವ ಎಂಟುನೂರು ವಿಶಿಷ್ಟ ಲಕ್ಷಣಗಳುಳ್ಳ ಅಶ್ವಗಳನ್ನು ಅರಸುತ್ತಾ ಭಿಕ್ಷಾರ್ಥಿಯಾಗಿ ಬಂದ ಗಾಲವನಿಗೆ ಯಯಾತಿ ತನ್ನ ಸ್ವಂತ ಮಗಳಾದ ಮಾಧವಿಯನ್ನೇ ದಾನಮಾಡುತ್ತಾನೆ. ಅವಳ ವಿದ್ಯೆ, ಯೌವ್ವನ, ರೂಪಸಂಪತ್ತುಗಳನ್ನು ಸಾರಿ ಅವಳನ್ನು ಪುಣ್ಯವಂತ ರಾಜನಿಗೆ ಕೊಟ್ಟು ನಿಮಗೆ ಬೇಕಾಗಿರುವ ಅಶ್ವಗಳನ್ನು ಕನ್ಯಾಶುಲ್ಕದ ರೂಪದಲ್ಲಿ ಪಡೆದುಕೊಳ್ಳಿ ಎಂದು ಹೇಳುವ ಮೂಲಕ ಯಾವ ತಂದೆಯು ಮಾಡದ, ಮಾಡಬಾರದ ಕೆಲಸವನ್ನು ಮಾಡುತ್ತಾನೆ. ಹೀಗಾಗಿ ಮಾಧವಿಯ ಕನಸು ಕನಸಾಗಿ ಉಳಿಯುತ್ತದೆ, ಸ್ವಯಂವರ ಸ್ವಯಂವರವಾಗಿಯೇ ಉಳಿದು ಅವಳ ಬಾಳಿನಲ್ಲಿ ಪುರುಷನಾಟವೇ ಮೊದಲಾಗುತ್ತದೆ, ಮಿಗಿಲಾಗುತ್ತದೆ.

'ಅಪ್ಪಾ' ಎಂಬ ಶಬ್ದದ ಮೂಲಕ ತನ್ನ ದಾನವನ್ನು ಪ್ರಶ್ನಿಸಲು ಮುಂದಾದ ಮಾಧವಿಯನ್ನು ಪುರುಷ ವ್ಯವಸ್ಥೆ ತುಳಿಯುತ್ತದೆ. ಚಿಕ್ಕಮ್ಮ ಕೂಡ ದಾನಕ್ಕೆ

ಒಪ್ಪಿರುವುದಾಗಿ ತಿಳಿದಾಗ ಮಾಧವಿ ಅನ್ಯಮಸ್ಕಳಾಗಿ ಗಾಲವನನ್ನು ಹಿಂಬಾಲಿಸುತ್ತಾಳೆ. ಧರ್ಮ ಆತ್ಮಗಳ ಬಗ್ಗೆ ಭಾರೀ ಜಿಜ್ಞಾಸೆ ನಡೆಸುವಂತಹ ಗಾಲವ ಮುನಿ ಕೂಡ ತನ್ನ ಕಾರ್ಯಸಾಧನೆಗೆ ಬೇರೆಯವರನ್ನು ಬಲಿಕೊಡುವುದು ಎಷ್ಟು ಸರಿ? ಅದು ಯಾವ ಧರ್ಮ ಎಂದು ಪ್ರಶ್ನಿಸಿಕೊಳ್ಳುವುದಿಲ್ಲ. ಮಾಧವಿಗಾಗುವ ಅನ್ಯಾಯವನ್ನು ನೋಡಿಯೂ ಗುರುಕಾಣಿಕೆ ಸಂಪಾದಿಸಲು ಅನ್ಯಮಾರ್ಗವನ್ನು ಹಿಡಿಯುವುದಿಲ್ಲ ಬದಲಾಗಿ ಪುಣ್ಯ-ಸ್ವರ್ಗಗಳ ಮಾತನಾಡುತ್ತಾನೆ.

ಗಾಲವ ಮತ್ತು ಮಾಧವಿಯ ನಡುವೆ ನಡೆವ ಸಂಭಾಷಣೆ ಹೀಗಿದೆ:

**ಗಾಲವ:** 'ಇಹಲೋಕದಲ್ಲಿ ಕಷ್ಟ ಮನುಷ್ಯನನ್ನು ಹಣ್ಣುಮಾಡುವುದಕ್ಕೆ ಕಾಯಿ ಹಣ್ಣಾಗಬೇಕಾದರೆ ಎಷ್ಟು ಅವಸ್ಥೆ ದಾಟಬೇಕು ಬಲ್ಲೆಯಾ? ಸ್ವರ್ಗ ಪ್ರಾಪ್ತಿಗೆಂದು ಯಜ್ಞಯಾಗಾದಿಗಳನ್ನು ಮಾಡುವವರು ಎಷ್ಟೋ ಜನ ಇದ್ದಾರೆ'

**ಮಾಧವಿ :** 'ಹೌದು, ನನ್ನ ತಂದೆ ಯಜ್ಞಗಳನ್ನು ಮಾಡಿದ್ದಾರೆ. ನಾನು ಅದನ್ನು ಮಾಡಲಿಲ್ಲ. ಆದರೆ ನಾನು ಯಜ್ಞಪಶುವೆಂದಷ್ಟೇ ಗೊತ್ತು ನನಗೆ' (ಪುಟಸಂಖ್ಯೆ ೪೫) ಎನ್ನುವಲ್ಲಿ ಮಾಧವಿಯ ನೋವು, ನಿಸ್ಸಹಾಯಕತೆಯನ್ನು ಮನಗಾಣಬಹುದು ಮತ್ತು ತಮ್ಮ ಕಾರ್ಯಸಾಧನೆಗೆ ಮುನಿವೃಂದದವರು ಅನುಸರಿಸುತ್ತಿದ್ದ ವಾಮನಮಾರ್ಗವನ್ನು ಕಾದಂಬರಿ ಅರಹುತ್ತದೆ.

ಐವತ್ತು ವರ್ಷದ ಹರ್ಯಶ್ವ ಮಾಧವಿಯನ್ನು ನೋಡಿದ ಕೂಡಲೇ 'ಮುನಿವರ್ಯ, ಈ ಕನ್ಯೆಯನ್ನು ನೋಡಿದಾಕ್ಷಣ ಇವಳಲ್ಲಿ ಮೋಹಿತನಾಗಿದ್ದೇನೆ. ಕನ್ಯಾಶುಲ್ಕವೆಂದು ಎಷ್ಟು ಧನಕನಕ ಬೇಕು ಹೇಳಿ? ಕಡೆಗೆ ನನ್ನ ರಾಜ್ಯವನ್ನು ಸಹ ನಿಮಗೆ ಕೊಟ್ಟುಬಿಡುತ್ತೇನೆ' ಎನ್ನುತ್ತಾನೆ. ತಂದೆ ವಯಸ್ಸಿನವನೊಂದಿಗೆ ಇರಬೇಕಾಗಿ ಬಂದಾಗ ಮಾಧವಿಯ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುತ್ತದೆ. ತನಗೊದಗಿದ ದುಃಸ್ಥಿತಿಗಾಗಿ ಮರುಗುತ್ತಾಳೆ. ಅಂದರೆ ತಂದೆ ಮಗಳ ವಯಸ್ಸಿನ ಅಂತರವನ್ನು ಕಾಣದೆ ಹೆಣ್ಣನ್ನು ಕಾಮದೃಷ್ಟಿಯಿಂದ ನೋಡುತ್ತಿದ್ದುದ್ದನ್ನು ಕಾದಂಬರಿ ಧ್ವನಿಸುತ್ತದೆ. ಗಾಲವನಿಗೆ ಅಗತ್ಯವಿದ್ದ ವಿಶಿಷ್ಟ ಲಕ್ಷಣಗಳುಳ್ಳ ಎಂಟುನೂರು ಅಶ್ವಗಳು ಹರ್ಯಶ್ವನ ಬಳಿ ಸಿಗುವುದಿಲ್ಲ ಆಗ ಹರ್ಯಶ್ವ "ಒಂದು ಯುಕ್ತಿ. ಮಾಧವಿಯಲ್ಲಿ ನಾನು ಯಥೇಚ್ಛವಾಗಿ ಕಾಮಸುಖ ಸವಿದು ಪುತ್ರಸಂತಾನ ಪಡೆಯುತ್ತೇನೆ. ಆನಂತರ ಅವಳನ್ನು ನಿಮಗೆ ವಾಪಸ್ಸು ಕೊಡುವೆ. ಆಗ ಅವಳನ್ನು ಇನ್ನೊಬ್ಬ ರಾಜನಿಗೊಪ್ಪಿಸಿ, ಉಳಿದ ಅಶ್ವಗಳನ್ನು ಅವನಿಂದ ಪಡೆದುಕೊಳ್ಳಿ. ಅದರಲ್ಲಿ ದೋಷವೇನು?' ಎನ್ನುತ್ತಾನೆ. ಗಾಲವನಿಗೂ ಅದೇ ಸರಿ ಎನಿಸುತ್ತದೆ. ಮಾಧವಿಯ ವಿಚಾರದಲ್ಲಿ ಮನುಷ್ಯತ್ವವನ್ನು ಮರೆಯುವ ಗಾಲವ ಮಾಧವಿಯ ಹಣೆಬರಹಕ್ಕೆ ವಿಧಿಯನ್ನು ಹೊಣೆಮಾಡುತ್ತಾನೆ. ಮಾಧವಿ ಒಂದು ವರ್ಷದ ಅವಧಿಗೆ ಹರ್ಯಶ್ವನಲ್ಲಿ ಉಳಿಯುತ್ತಾಳೆ.

ಮಾಧವಿ ಗರ್ಭಿಣಿಯಾದಾಗ ಅರಮನೆಯ ದಾಸಿ ಕೇಸರಿಯಂಥ ಮಗನೇ ಹುಟ್ಟಲೆಂದು ಹಾರೈಸುತ್ತಾಳೆ. ಆಗ ಮಾಧವಿ "ಮಗನೇ ಹುಟ್ಟುತ್ತಾನೆ ಅಂತ ಏನು ನಿಶ್ಚಯ? ಮಗಳೂ ಹುಟ್ಟಬಹುದು!" ಎಂದಾಗ ದಾಸಿ "ಛೆ ಆ ಮಾತಾಡ್ಬೇಡಿ. ಮಹಾರಾಜರಿಗೆ ಗಂಡು ಮಗೂನ ಕೊಡಿ, ಆಗ ನಿಮ್ಮ ಜನ್ಮ ಸಾರ್ಥಕವಾಗುತ್ತೆ" ಎನುತ್ತಾಳೆ. ಮಾಧವಿಗೆ ದಾಸಿಯ ಮಾತು ನಿಜ ಎನಿಸಿತು. ಗಂಡು ಮಗು ಹುಟ್ಟುವುದರಿಂದ ತನ್ನ ಜನ್ಮಸಾರ್ಥಕವಾಗುವುದು ಮಾತ್ರವಲ್ಲ, ಮಗುವಿನ ಜನ್ಮವೂ ಪಾವನವಾಗುತ್ತದೆ. ಆದರೆ ಹೆಣ್ಣು ಹುಟ್ಟಿದರೇ? ಬೇಡಪ್ಪಾ ಬೇಡ. ಇನ್ನೊಂದು ಹೆಣ್ಣು ತನ್ನ ಹಾಗೆ ಯಾಕೆ ನರಳಬೇಕು?" ಎಂದು ಆಲೋಚಿಸುತ್ತಾಳೆ. ಅಂತೂ ಹರ್ಯಶ್ವನಿಗೆ ಗಂಡು ಮಗುವಾದಾಗ ತುಂಬ ಸಂತೋಷಪಡುತ್ತಾನೆ.

ಹರ್ಯಶ್ವನ ಬಳಿ ಒಂದು ವರ್ಷ ಮಾತ್ರ ಇರಬೇಕೆಂದು ಗಾಲವ ಮಾಧವಿಗೆ ಹೇಳಿರಲಿಲ್ಲ. ಹರ್ಯಶ್ವನ ರಾಣಿಯಿಂದ ವಿಷಯ ತಿಳಿದ ಮಾಧವಿಗೆ ಮನಸ್ಸು ಮತ್ತೂ ಛಿದ್ರಛಿದ್ರವಾಗುತ್ತದೆ. ಮಗುವನ್ನು ಬಿಟ್ಟುಹೋಗಲು ದುಃಖಿಸುತ್ತಾಳೆ. ಮಹಾರಾಜನನ್ನು ತನ್ನ ಮನಸ್ಸು ಮೆಚ್ಚಲಿಲ್ಲ ನಿಜ. ಆದರೆ ಈ ಮಗುವಿಗೋಸ್ಕರ ನಾನು ಇಲ್ಲೇ ಇದ್ದು ಬಿಡುತ್ತೇವೆ; ತನಗೆ ಜೀವನದಲ್ಲಿ ಇನ್ನಾವ ಆಸೆ–ಆಕಾಂಕ್ಷೆಗಳೂ ಇಲ್ಲ ಅಂದುಕೊಳ್ಳುತ್ತಾಳೆ. ಆದರೆ ಅವಳ ಬದುಕು ಗಾಲವನ ಕೈಯಲ್ಲಿದ್ದುದರಿಂದ ಅವಳ ಆಸೆ ಈಡೇರುವುದಿಲ್ಲ.

ಮಗು ಹುಟ್ಟಿದ ಮೇಲೆ ದುಂಡುದಂಡಗೆ ಕಾಣುತ್ತಿದ್ದ ಮಾಧವಿಯನ್ನು ಕಂಡು ಹರ್ಯಶ್ವನಲ್ಲಿ ಅವಳನ್ನು ಕೂಡುವ ಬಯಕೆಯಾಗುತ್ತದೆ. ಅವಳು ಹೋಗುತ್ತಾಳೆಂಬ ದುಃಖ ಅವನಿಗಿಲ್ಲ. ಮಾಧವಿ ಒಲಿದು ದೇಹ ನೀಡಿದವಳಲ್ಲವಾದುದರಿಂದ ಅವನಿಗೆ ಅವಳಿಂದ ಹೆಚ್ಚಿನ ಸುಖವೂ ಸಿಕ್ಕಿರಲಿಲ್ಲ. ಆದರೂ ಅಂತಹ ತುಂಬು ದೇಹದ ಅಪ್ಸರೆ ತನ್ನಗಿನ್ನೆಂದಿಗೆ ಸಿಗುವಳೋ ಎಂಬ ವ್ಯಥೆ ಅವನಿಗೆ. ತನ್ನ ಬಳಿ ಸಾರಿದ ಹರ್ಯಶ್ವನಿಗೆ ಮಾಧವಿ ನಿಷ್ಠುರಳಾಗಿ ಹೇಳುತ್ತಾಳೆ.

"ಮಹಾರಾಜ, ಮಗ ಹುಟ್ಟಿ ನಿಮ್ಮ ಸಂಕಲ್ಪ ಈಡೇರಿತು. ಇನ್ನು ನಿಮಗೆ ನನ್ನ ಮೇಲೆ ಯಾವ ಅಧಿಕಾರವೂ ಇಲ್ಲ" ಈ ಮಾತಿನಿಂದ 'ದರ್ಪದ ಹೆಣ್ಣೇ ನಿನಗೆಂಥ ಸೊಕ್ಕು! ಎಂದು ರಾಜ ಅವಳ ಕೆನ್ನೆಗೆ ಹೊಡೆಯಲು ಕೈಯೆತ್ತಿದವನು ಅವಳು ತನಗೆ ಮಗುವನ್ನು ಕೊಟ್ಟ ತಾಯಿಯೆಂದು ಸುಮ್ಮನಾಗುತ್ತಾನೆ. ಹರ್ಯಶ್ವನಿಗೆ ಹೇಳಿದಂತೆ ಒಂದು ವರ್ಷ ಮುಗಿದ ಕೂಡಲೇ ಗಾಲವ ಬಂದು ಮಾಧವಿಯನ್ನು ಕರೆದುಕೊಂಡು ಹೋಗುತ್ತಾನೆ. ಇಲ್ಲಿ ಮಾಧವಿ ತನಗಾಗುತ್ತಿರುವ ಅನ್ಯಾಯವನ್ನು ಕಂಡು ದುಃಖಿಸುತ್ತಳಾದರೂ ದುಃಖದ ಜೊತೆಯಲ್ಲಿ ಅವಳ ಪ್ರತಿಭಟನೆಯ ಮುಖವನ್ನು ನಾವು ಕಾಣಬಹುದು. ಪ್ರತಿಹಂತದಲ್ಲಿಯೂ ಅವಳು ಪುರುಷ ವ್ಯವಸ್ಥೆಯಿಂದ ತಪ್ಪಿಸಿಕೊಳ್ಳಲಾಗದೇ ಒದ್ದಾಡುತ್ತಾಳೆ. ಹರ್ಯಶ್ವನಿಂದ ಇನ್ನೂರು ಅಶ್ವಗಳನ್ನು

ಪಡೆದುಕೊಂಡ ಗಾಲವ ದಿವೋದಾಸನಲ್ಲಿ ಇನ್ನೂರು ಅಶ್ವಗಳಿಗಾಗಿ ಮಾಧವಿಯನ್ನು ಬಿಡುತ್ತಾನೆ. ಇಲ್ಲಿಯೂ ಮಾಧವಿ ತನ್ನದಲ್ಲದ ಬದುಕನ್ನು ನಡೆಸುತ್ತಾಳೆ. ದಿವೋದಾಸನಿಗೆ ಗಂಡು ಮಗುವಿಲ್ಲದೆ ಪುತ್ರ ಕಾಮೇಷ್ಟಿಯಾಗಮಾಡಿಸುತ್ತಾನೆ. ಇದನ್ನು ಕಾದಂಬರಿಕಾರರು ವೈಜ್ಞಾನಿಕವಾಗಿ ಒರೆಗೆ ಹಚ್ಚುತ್ತಾರೆ. ಗಂಡು–ಹೆಣ್ಣಿನ ಸಹಜವಾದ ಸಂಬಂಧದಿಂದ ಮಕ್ಕಳಾಗುತ್ತದೆಯೇ ಹೊರತು ಪುತ್ರಕಾಮೇಷ್ಟಿಯಾಗ ಮಾಡುವುದರಿಂದಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಪುತ್ರಕಾಮೇಷ್ಟಿಯಾಗದಿಂದ ದೊರೆತ ಪಾಯಸವನ್ನು ದಿವೋದಾಸ ತನ್ನ ರಾಣಿಯರಿಗೆ ಕುಡಿಯಲು ಹೇಳುತ್ತಾನೆ. ಸತ್ಯವತಿ ರಾಣಿಯೇ ಹೆಚ್ಚು ಪಾಯಸವನ್ನು ಕುಡಿಯುತ್ತಾಳೆ. ಪಾಯಸದ ಬಟ್ಟಲು ಮಾಧವಿಯ ಬಳಿಗೆ ಬರುವಷ್ಟರಲ್ಲಿ ಪಾಯಸ ಖಾಲಿಯಾಗಿ ಒಂದೇ ಒಂದು ಹನಿಯ ಅವಳಿಗೆ ಸಿಗುವುದಿಲ್ಲ.

'ಮಹಾರಾಜ ಪಾಯಸ ಕುಡಿದ್ರೆ ಮಾತ್ರ ಮಕ್ಕಳಾಗತಾರಾ?" ಎಂದು ಮಾಧವಿ ಪ್ರಶ್ನಿಸುವ ಮೂಲಕ ವ್ಯಂಗ್ಯದ ನಗೆಯಾಡುತ್ತಾಳೆ. ಋಷಿಗಳು ಜನರನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳಲು ಬಿತ್ತುತ್ತಿದ್ದ ಮೂಢನಂಬಿಕೆಯೆಂಬುದನ್ನು ಕಾದಂಬರಿಕಾರರು ಮಾಧವಿಯ ಮೂಲಕ ಹೇಳಿಸಿದ್ದಾರೆ. ಮಾಧವಿಗೆ ಮೊದಲು ಮಗುವಾಗುತ್ತದೆ.

ಅಂದಿನ ಸಮಾಜದಲ್ಲಿ ಹೆಣ್ಣೆಂದರೆ ಕಾಮದ ವಸ್ತು ಯಾರೇ ಚೆಂದದ ಹೆಣ್ಣಾದರೂ ರಾಜರ ಕಣ್ಣಿಗೆ ಬಿದ್ದಕೂಡಲೇ ಅವರನ್ನು ವಶಮಾಡಿಕೊಳ್ಳುತ್ತಿದ್ದರು. ಸಾಮಾನ್ಯ ಸ್ತ್ರೀಯರಾದರೆ ಅವರು ಒಂದು ದಿನದ ಸುಖಕ್ಕೆ ಮಾತ್ರ ಸೀಮಿತ–ರಾಗುತ್ತಿದ್ದರು. ಅವರ ಮುಂದಿನ ಜೀವನದ ಪ್ರಶ್ನೆ ರಾಜನನ್ನು ಕಾಡುತ್ತಿರಲಿಲ್ಲ. ಅವರು ದಾಸಿಯರಾಗಿ ಅರಮನೆಯಲ್ಲಿಯೇ ಇರಬೇಕಾಗುತ್ತಿತ್ತು. ಹೊರಪ್ರಪಂಚಕ್ಕೆ ಕಾಲಿಡುವಂತಿರಲಿಲ್ಲ. ದಿವೋದಾಸನ ಅರಮನೆಯಲ್ಲಿದ್ದ ಮೇಖಲಾ ಅದಕ್ಕೊಂದು ಉತ್ತಮ ಉದಾಹರಣೆ. ಮೆರವಣಿಗೆಯಲ್ಲಿ ಮೇಖಲಾಳನ್ನು ಕಂಡ ದಿವೋದಾಸ ನೂರು ವರಹಗಳಿಗೆ ಕೊಂಡುಕೊಳ್ಳುತ್ತಾನೆ. ಒಂದೇ ಒಂದು ದಿನ ರಾಜನ ಮುಖವನ್ನು ನೋಡಿದ ಮೇಖಲಾ ತನ್ನವರಿಗೆ ಹೊರೆಯಾಗದೇ ಅಲ್ಲಿಯೇ ಉಳಿದು ಹೊಟ್ಟೆ–ಬಟ್ಟೆಯನ್ನು ತುಂಬಿಸಿಕೊಳ್ಳುತ್ತಾಳೆ. ಇನ್ನು ಮಂದಾರಮಾಲೆ ಒಳ್ಳೆಯ ನೃತ್ಯಗಾರ್ತಿ ತನ್ನವರೆಲ್ಲ ಇದ್ದರೂ ದೇವದಾಸಿಯಾಗಿರಬೇಕಾದ ಪರಿಸ್ಥಿತಿಗೆ ಸಿಲುಕುತ್ತಾಳೆ. ಅಂದರೆ ಸಮಾಜ ಒಂದು ಹೆಣ್ಣನ್ನು ಎಷ್ಟು ನಿಕೃಷ್ಟವಾಗಿ ಕಾಣುತ್ತಿತ್ತು ಎಂಬುದನ್ನು ಕಾದಂಬರಿ ಮನವರಿಕೆಮಾಡುತ್ತದೆ. ಮಾಧವಿಗೆ ಇವರ ಜೀವನಕಥೆಯನ್ನು ಕೇಳಿದಾಗ ಪುರುಷನ ಶೋಷಣೆಗೆ ಒಳಗಾಗುತ್ತಿರುವವಳು ನಾನು ಮಾತ್ರವಲ್ಲ ತನ್ನಂತಹ ಅನೇಕ ಸ್ತ್ರೀಯರು ಬಲಿಯಾಗುತ್ತಿದ್ದಾರೆ ಎಂದು ನೊಂದುಕೊಳ್ಳುತ್ತಾಳೆ. ಮೇಖಲಾ ಜೊತೆ

ಪಲಾಯನ ಮಾಡಲು ನಿರ್ಧರಿಸುತ್ತಾಳೆ. ಆದರೆ ನಾವು ಎಲ್ಲಿಯೇ ಹೋದರೂ ರಾಜ ಹಿಡಿದು ತರಿಸುತ್ತಾನೆಂದು ಸುಮ್ಮನಾಗುತ್ತಾಳೆ.

ತನ್ನ ಸಾಧನೆ ಸಿದ್ಧಿಸಿದ ಮೇಲೆ ಗಾಲವ ಮಾಧವಿಯನ್ನು ಯಯಾತಿಗೆ ಒಪ್ಪಿಸುತ್ತಾನೆ. ಪಾಪಕ್ಕೆ ಗುರಿಯಾಗಬೇಕಾಗುತ್ತದೆ ಎಂದು ಆ ಪಾಪ ಪರಿಹಾರಕ್ಕಾಗಿ ಮಾಧವಿಗೆ ಸ್ವಯಂವರವನ್ನು ಏರ್ಪಡಿಸುತ್ತಾನೆ. ಆದರೆ 'ನಿನಗಿಷ್ಟ ಬಂದವನನ್ನು ಆರಿಸಿಕೋ' ಎಂಬ ಆಯ್ಕೆ ಸ್ವಾತಂತ್ರ್ಯ ಅವಳಿಗೆ ಅರ್ಥಹೀನವಾಗಿ ಕಾಣುತ್ತದೆ. ಜೀವನದ ಬಗ್ಗೆ, ಮನುಷ್ಯನ ದಬ್ಬಾಳಿಕೆಯ ಬಗ್ಗೆ ತೀವ್ರ ತಿರಸ್ಕಾರ ಮೂಡಿ ಅವರೆಲ್ಲರಿಂದ ದೂರ ಹೊರಟುಹೋಗುತ್ತಾಳೆ. ಇದು ಮಾಧವಿಯ ಬಂಡಾಯ. ಈ ಸಮರದಲ್ಲಿ ವೈಯಕ್ತಿಕ ಗೆಲವು ಅವಳದಾಗುತ್ತದೆ.

ಕಾದಂಬರಿ ಅಂದಿನ ಪುರುಷ ಪ್ರಧಾನ ಸಮಾಜದಲ್ಲಿದ್ದ ಹೆಣ್ಣಿನ ಶೋಷಣೆ, ಸ್ಥಿತಿಗತಿಗಳನ್ನು ಸರಳ–ಸುಂದರ ನಿರೂಪಣೆಯ ಮೂಲಕ ಕಟ್ಟಿಕೊಡುತ್ತದೆ. ಹೆಣ್ಣೆಂದರೆ ಕೇವಲ ಭೋಗದ ವಸ್ತು, ಮಕ್ಕಳನ್ನು ಹೆರುವ ಯಂತ್ರ ಎಂಬಷ್ಟೇ ಭಾವನೆ ಇದ್ದ ಪುರುಷ ಸಮಾಜದಲ್ಲಿ ಹೆಣ್ಣಿನ ಶೋಷಣೆಗೆ ಹೆಣ್ಣು ಕೂಡ ಕಾರಣಳೇ ಎಂಬುದನ್ನು ಕಾದಂಬರಿ ಮನದಟ್ಟು ಮಾಡುತ್ತದೆ. ಅಲ್ಲದೆ ಮುಖ್ಯವಾಗಿ ಅಂದಿನ ಸಮಾಜವ್ಯವಸ್ಥೆಯನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಿದೆ. ಪುರಾಣ ವ್ಯಕ್ತಿ ಬಂಡುಗಾರ್ತಿಯಾಗಿರುವುದು ಕಾದಂಬರಿಯ ವಿಶೇಷ.

# ಅಧ್ಯಾಯ ೫

# 'ಜಯ' ಕಾದಂಬರಿಕಾರರ ಪರಿಚಯ

ಎಂ.ಎಸ್.ವೇದಾ ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ., ಪದವಿಯನ್ನು ಚಿನ್ನದ ಪದಕದೊಂದಿಗೆ ಗಳಿಸಿದ ಪ್ರತಿಭಾನ್ವಿತೆ ಮತ್ತು ಚದುರಂಗ ಅವರ 'ಬದುಕು – ಬರಹ ' ಎಂಬ ವಿಷಯ ಕುರಿತು ಸಂಶೋಧನೆ ನಡೆಸಿ ಮೈಸೂರು ವಿಶ್ವವಿದ್ಯಾನಿಲಯದಿಂದಲೇ ಪಿಎಚ್.ಡಿ ಪದವಿಯನ್ನೂ ಪಡೆದಿದ್ದಾರೆ. ಕವಯತ್ರಿಯಾಗಿ, ಕತೆಗಾರ್ತಿಯಾಗಿ, ಕಾದಂಬರಿಗಾರ್ತಿಯಾಗಿ ಹಲವು ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ.

**ಕೃತಿಗಳ ಪರಿಚಯ:**

**ಕವನ ಸಂಕಲನಗಳು**

೧) ಕಾವ್ಯಕೂಸು – ೧೯೮೫

೨) ಗಂಗೋತ್ರಿಯಲ್ಲಿ – ೧೯೮೭

೩) ಬಿಳಲುಗಳು – ೧೯೮೯

೪) ದಾಖಲೆಗಳು ಬೇಡ – ೨೦೦೪

**ಕಥಾಸಂಕಲನಗಳು**

೧) ಪ್ರೀತಿ ಮತ್ತು ಸಾವು – ೧೯೯೩

೨) ಪಾಲು – ೧೯೯೭

೩) ಬಿಳಿಯೆಣ್ಣು ಮತ್ತು ದುಂಡವ್ವನ ದೆವ್ವ – ೨೦೦೩

**ಕಾದಂಬರಿಗಳು**

೧) ಜಮೀನು – ೨೦೦೦

೨) ಜಯ – ೨೦೦೪

ಎಂ.ಎಸ್.ವೇದಾ ಅವರ ಸಾಹಿತ್ಯ ಸಾಧನೆಗೆ ಹಲವಾರು ಪುರಸ್ಕಾರಗಳು ಅವರನ್ನು ಅರಸಿ ಬಂದಿವೆ.

೧) ಗಂಗೋತ್ರಿಯಲ್ಲಿ ಎಂಬ ಕವನ ಸಂಕಲನಕ್ಕೆ ಅಖಿಲ ಕರ್ನಾಟಕ ಲೇಖಕಿಯರ ಸಂಘದ ಗೀತಾ ದೇಸಾಯಿ ದತ್ತಿನಿಧಿ ಪ್ರಶಸ್ತಿ

೨) 'ಪ್ರೀತಿ ಮತ್ತು ಸಾವು' ಎಂಬ ಕಥಾಸಂಕಲನಕ್ಕೆ ಅಖಿಲ ಕರ್ನಾಟಕ ಲೇಖಕಿಯರ ಸಂಘದ ಎಚ್.ವಿ.ಸಾವಿತ್ರಮ್ಮ ದತ್ತಿನಿಧಿ.

೩) 'ಜಮೀನು' ಕಾದಂಬರಿಗೆ ಗುಲ್ಬರ್ಗಾದ ಎಸ್.ಆರ್.ಪಾಟೀಲ್ ಪ್ರತಿಷ್ಠಾನದ ಮಾಣಿಕಭಾಯಿ ಪ್ರಶಸ್ತಿ, ಬೆಂಗಳೂರು ಗೊರೂರು ಪ್ರತಿಷ್ಠಾನದ ಗೊರೂರು ಸಾಹಿತ್ಯ ಪ್ರಶಸ್ತಿ, ಹಾವೇರಿಯ ಹಾವನೂರು ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಲೇಖಕಿಯರ ಉತ್ತಮ ಕಾದಂಬರಿ ಪ್ರಶಸ್ತಿಗಳು ಸಂದಿವೆ.

'ಗಂಗೋತ್ರಿಯಲ್ಲಿ' ಮತ್ತು 'ಬಿಳಲುಗಳು' ಎಂಬ ಕವನಸಂಕಲನಗಳಲ್ಲಿ ನವಿರಾದ ಭಾವನೆಗಳನ್ನು ಕಾವ್ಯವಾಗಿಸಿದ್ದಾರೆ.

'ಪ್ರೀತಿ ಮತ್ತು ಸಾವು' ಕಥಾಸಂಕಲನದಲ್ಲಿ ಭಾಷಾಶೈಲಿ ವಿಶಿಷ್ಟವಾಗಿದ್ದು ಹೃದಯ ಸ್ಪರ್ಶಿಯಾದ ಕಥೆಗಳಿವೆ.

'ಜಮೀನು' ಕಾದಂಬರಿ ಇಂದಿನ ಗ್ರಾಮೀಣ ಬದುಕಿನ ವಿಶಿಷ್ಟ ಚಿತ್ರಣವನ್ನು ಕಟ್ಟಿಕೊಡುತ್ತದೆ.

## ಅಧ್ಯಾಯ ೬

## ಜಯ ಕಾದಂಬರಿಯ ಕಥಾ ವಿನ್ಯಾಸ

ಹದಿನೆಂಟು ದಿನಗಳ ಕಾಲ ನಡೆಯುವ ಮಹಾಭಾರತದ ಕುರುಕ್ಷೇತ್ರದ ಯುದ್ಧವನ್ನು ಹದಿನೆಂಟು ಅಧ್ಯಾಯಗಳಲ್ಲಿ ನಿರೂಪಿಸಿರುವ ಎಂ.ಎಸ್.ವೇದಾ ಅವರ 'ಜಯ' ಅತ್ಯಂತ ವಿಭಿನ್ನವೂ, ವೈಶಿಷ್ಟ್ಯಪೂರ್ಣವೂ ಆಗಿದೆ. ಮಹಾಭಾರತವೆಂದರೆ ಕೌರವ-ಪಾಂಡವರ ಕಥೆ ದ್ರೌಪದಿಯೇ ಕುರುಕ್ಷೇತ್ರ ಯುದ್ಧಕ್ಕೆ ಆದಿ ಎಂದು ತಿಳಿದಿರುವ ಮನಸ್ಸುಗಳಿಗೆ 'ಜಯ' ಅದರ ಇನ್ನೊಂದು ಮುಖವನ್ನು ಪರಿಚಯಿಸುತ್ತದೆ. ಈ ಕಾದಂಬರಿ ಅಭಿಜಾತ ಹಾಗೂ ಶಿಷ್ಟ ಮಹಾಭಾರತಗಳು ಮಾನ್ಯಮಾಡುವ ವೈಚಾರಿಕತೆಯನ್ನು ಮತ್ತು ಮೌಲ್ಯಗಳನ್ನು ಪ್ರಶ್ನಿಸುತ್ತದೆ. ಅವುಗಳ ಪುನರ್ಮೌಲ್ಯೀಕರಣ ಮಾಡುತ್ತದೆ. ಮುಖ್ಯವಾಗಿ ಸ್ತ್ರೀವಾದಿ ಪರಿಪ್ರೇಕ್ಷ್ಯದಿಂದ ನಿರೂಪಿಸಲ್ಪಟ್ಟಿರುವ ಈ ಕಾದಂಬರಿ ವೈಚಾರಿಕ ನೆಲೆಯಲ್ಲಿ ಎತ್ತುವ ಮಹತ್ವದ ಪ್ರಶ್ನೆಯೆಂದರೆ ಅಪಾರ ಸಾವು-ನೋವುಗಳಲ್ಲಿ ಕೊನೆಗಾಣುವ ಕುರುಕ್ಷೇತ್ರ ಯುದ್ಧಕ್ಕೆ ಕಾರಣರಾರು? ದ್ರೌಪದಿ?, ಕೃಷ್ಣ?, ದುರ್ಯೋಧನ? ಇವರೆಲ್ಲರ ವ್ಯಕ್ತಿತ್ವ ಮತ್ತು ವರ್ತನೆಗಳನ್ನು ವಸ್ತುನಿಷ್ಠವಾಗಿ ಕಾರಣಗಳನ್ನು ಹುಡುಕುತ್ತ, ವಿಶ್ಲೇಷಿಸುತ್ತ ಕೊನೆಗೆ ಕಾದಂಬರಿ ನೀಡುವ ಉತ್ತರವೆಂದರೆ 'ಕುರುಕ್ಷೇತ್ರ ಯುದ್ಧಕ್ಕೆ ನಿಜವಾದ ಕಾರಣ ಪುರುಷ ರಾಜಕಾರಣ' ಎಂಬುದಾಗಿದೆ. ಆಧುನಿಕ ಸ್ತ್ರೀವಾದಿ ಕೇಟ್ ಮಿಲೆಟ್ ರೂಪಿಸುವ 'ಲೈಂಗಿಕ ರಾಜಕಾರಣ' ಎಂಬ ಪರಿಕಲ್ಪನೆಗೆ ಸಂವಾದಿಯಾಗಿರುವ 'ಪುರುಷರಾಜಕಾರಣ' ಎಂಬ ಪರಿಕಲ್ಪನೆಯ ಮೂಲಕ ಹೇಗೆ ಅಸಮಾನ ಅಧಿಕಾರಾಧರಿತ ಸ್ತ್ರೀ-ಪುರುಷ ಸಂಬಂಧಗಳೇ ಕೊನೆಗೆ ಕುರುಕ್ಷೇತ್ರದಂತಹ ಯುದ್ಧವನ್ನು ಅನಿವಾರ್ಯವಾಗಿಸುತ್ತದೆ ಎಂಬ ಮೌಲಿಕ ಚಿಂತನೆಯನ್ನು ಈ ಕಾದಂಬರಿ ಮಂಡಿಸುತ್ತದೆ.

ಕೆಲವೊಮ್ಮೆ ಪಾತ್ರಗಳ ನೆನಪಿನಲ್ಲಿ, ಕೆಲವೊಮ್ಮೆ ಹಿನ್ನೋಟದ ತಂತ್ರದಲ್ಲಿ ಮಹಾಭಾರತ ಕಥಾನಕ ಬೆಳೆಯುತ್ತದೆ ಪಾತ್ರಗಳು ರೂಪು ತಳೆಯುತ್ತವೆ. ಸಾಂಪ್ರದಾಯಿಕ ಸಮಾಜದ ಸ್ಥಾಪಿತ ಮೌಲ್ಯಗಳು ಪ್ರಶ್ನೆಗೆ ಒಳಗಾಗುತ್ತದೆ. 'ಜಯ'ದ ಪಾತ್ರವರ್ಗದಲ್ಲಿ ಸ್ಥೂಲವಾಗಿ ಎರಡು ಬಗೆ, ಮಹಾಭಾರತದ ಮೂಲಕ ಪರಿಚಯವಾಗಿರುವ ಪಾತ್ರಗಳು ಮತ್ತು ಕಾದಂಬರಿಕಾರರು ಕಲ್ಪಿಸಿರುವ ಹೊಸಪಾತ್ರಗು, ಸಮಾಜ ಪದ್ಧತಿಯ ವಿವಿಧ ಸ್ತರಗಳನ್ನು ಪ್ರತಿನಿಧಿಸುವಂತೆ ಇಲ್ಲಿ ಪಾತ್ರಗಳು ಬಹುಜಾಣ್ಮೆಯಿಂದ ಸೃಷ್ಟಿಸಲ್ಪಟ್ಟಿವೆ ಎಂಬುದು. ಮೇಲಿನ ಹಂತದಲ್ಲಿ ಪಾಂಡವರು, ಕೌರವರು, ತೀರ ಕೆಳಗಿನ ಹಂತದಲ್ಲಿ ಕಾಳಶಂಭು, ಅವನ ಮಡದಿ, ಸಾಮಂತ ಚಂದ್ರಸೇನ, ಅವನ ಮಡದಿ ರೋಹಿಣಿ ಇವರುಗಳು. ರೋಹಿಣಿ ಸಾಮಂತರಾಜನ ಮಡದಿಯಾಗಿ ಶ್ರೇಣೀಕೃತ ಸಮಾಜ ಪದ್ಧತಿಯಲ್ಲಿ ಸ್ವಲ್ಪ ಎತ್ತರದ ಸ್ತರಕ್ಕೆ

ಸೇರಿದವಳಾದರೂ ಅವಳ ಅಂತಸ್ತಿನಲ್ಲಿ ಆಗುವ ಏರುಪೇರುಗಳು ಅವಳನ್ನು ಎತ್ತರದ ಸ್ತರದಿಂದ ಕೆಳಸ್ತರಕ್ಕೆ ದೂಡಿಬಿಡುತ್ತವೆ. ಅವಳು ಅರಕ್ಷಿತಳು, ನಿರ್ಧನಳು, ಅಸಹಾಯಕಳು ಎಂದು ತಿಳಿದೊಡನೆ ಶಿಬಿರದ ವೈದ್ಯನಂತಹ ವ್ಯಕ್ತಿಯೂ ಅವಳನ್ನು ಶೋಷಿಸಲು ಹಿಂಜರಿಯುವುದಿಲ್ಲ. ಕಾದಂಬರಿಕಾರರು ಚಿತ್ರಿಸಿರುವ ಚಿತ್ರಣ ಬಹುಸೂಕ್ಷ್ಮವಾಗಿ ತಾತ್ತ್ವಿಕತೆಯನ್ನು ಕಟ್ಟಿಕೊಡುತ್ತದೆ. ಮೂಲಭಾರತ ಚೌಕಟ್ಟಿನಲ್ಲಿದ್ದ ಪಾತ್ರಗಳು ಹೊಸ ಚಿಂತನೆಯಲ್ಲಿ ಬೆಳೆಯುತ್ತವೆ.

ದ್ರೌಪದಿ ಮತ್ತು ಸುಭದ್ರೆಯರ ಪಾತ್ರಗಳು ಸವತಿ ಮಾತ್ಸರ್ಯದಂಥ ಕಲ್ಪನೆಯನ್ನು ಒಂದು ವಿಶಿಷ್ಟ ನೆಲೆಯಲ್ಲಿ ನೋಡುತ್ತವೆ. ಸುಭದ್ರೆ, ಅರ್ಜುನನನ್ನು ವಿವಾಹವಾಗಿ ಬಂದಾಗ ದ್ರೌಪದಿ ಅವಳ ಮೇಲೆ ಸವತಿ ಮಾತ್ಸರ್ಯವನ್ನು ತೋರುವುದಿಲ್ಲ. ಅಭಿಮಾನ್ಯು ಮರಣಹೊಂದಿದಾಗ ಸುಭದ್ರೆಯು ತನ್ನ ಪುತ್ರಶೋಕಕ್ಕೆ ದ್ರೌಪದಿಯೇ ಕಾರಣಳೆಂದು ಜರಿಯುವುದಿಲ್ಲ. ಇವರಿಬ್ಬರೂ ಸವತಿಯರಾದರೂ ಇವರ ನಡುವೆ ಅಪರೂಪದ ಸಖ್ಯವಿದೆ. ದ್ರೌಪದಿಯ ನೆರಳಿನಲ್ಲಿ ಅವಳ ಸ್ನೇಹದ ರಕ್ಷಣೆಯಲ್ಲಿಯೇ ಸುಭದ್ರೆ-ಅರ್ಜುನರ ದಾಂಪತ್ಯ ಬೆಳೆದುಬಂದಿದೆ. ಹೀಗೇ ದುಶ್ಯಲೆ, ಗಾಂಧಾರಿ, ಕುಂತಿ, ಭಾನುಮತಿ ಈ ಪಾತ್ರಗಳೆಲ್ಲ ಒಂದು ಭಿನ್ನ ತತ್ತ್ವದ ಒಳತಿಳಿವಿನಿಂದ ಸೃಷ್ಟಿಸಲ್ಪಟ್ಟಿವೆ.

ಮಹಾಭಾರತದಲ್ಲಿಲ್ಲದ ಹೊಸ ಪಾತ್ರಗಳು, ಅಭಿಲಾಷಾ, ರೋಹಿಣಿ, ಕಾಳಶಂಭು ಮತ್ತು ವೈದ್ಯ ಅಭಿಭೂ ಮತ್ತು ಚಂದ್ರಸೇನರ ಹೆಸರು ಮತ್ತು ಉಲ್ಲೇಖ ಮಹಾಭಾರತದಲ್ಲಿದ್ದರೂ ಹೆಸರಿನಿಂದಾಚೆಗೆ ಉಳಿದುದೆಲ್ಲ ವೇದಾರ ಸ್ವಂತ ಸೃಷ್ಟಿಯೇ ಆಗಿದೆ.

ಅಭಿಲಾಷಾ ಮತ್ತು ರೋಹಿಣಿ ಈ ಎರಡೂ ಪಾತ್ರಗಳು ಸುರಕ್ಷಿತ ಪರಿಸರದಲ್ಲಿ ಬೆಳೆದು ಬಂದ ಅಂತಃಪುರದ ಸ್ತ್ರೀಯರ ಮಾದರಿಗಳು ಈ ಎರಡೂ ಪಾತ್ರಗಳು ಯೌವನ, ಚೆಲುವು, ಮುಗ್ಧತೆಗಳನ್ನು ಹೊಂದಿವೆ. ಈ ಹುಡುಗಿಯರು ಕುರುಕ್ಷೇತ್ರದ ಲೋಕದಲ್ಲೂ ನಗೆಯ ಹೂಗಳನ್ನು ಅರಳಿಸುವವರು ಇವರ ನಗೆ ಕುರುಕ್ಷೇತ್ರದ ಯುದ್ಧದಿಂದಾಗಿ ಮುರುಟಿಹೋಗುತ್ತದೆ. ಹಾಗೇ ಉತ್ತರನ ಸುಕುಮಾರ್ಯ, ಅಭಿಮಾನ್ಯುವಿನ ಶೌರ್ಯ ಉತ್ತರೆಯ ಸಂಸಾರ ಸೌಖ್ಯ, ಸುಭದ್ರೆಯ, ದ್ರೌಪದಿಯರ ತಾಯ್ತನ, ಕಾಳಶಂಭುವಿನಂತಹ ಜನಸಾಮಾನ್ಯರ ಕೌಟುಂಬಿಕ ನೆಮ್ಮದಿ ಎಲ್ಲವೂ ಯುದ್ಧದಿಂದಾಗಿ ನಾಶವಾಗುತ್ತದೆ.

ವೇದಾ ಅವರ ಚಿತ್ರಣದಲ್ಲಿ ಉತ್ತರನ ಪಾತ್ರ ಬಹು ವಿಶಿಷ್ಟವಾದುದು. ಕುರುಕ್ಷೇತ್ರದ ಯುದ್ಧದಲ್ಲಿ ಮೊದಲದಿನವೇ ಉತ್ತರನ ಬಲಿಯಾಗುತ್ತದೆ. ಉತ್ತರ ಪಂಪಭಾರತದಲ್ಲಿ ಒಂದು ಸಾಲಿನ ಪಾತ್ರ. ಕುಮಾರವ್ಯಾಸನಲ್ಲಿ ಉತ್ತರ ಹಾಸ್ಯ ಪಾತ್ರ

ಸದಾ ಹೆಣ್ಣುಮಕ್ಕಳೊಡನೆ ತನ್ನ ಪೌರುಷವನ್ನು ಕೊಚ್ಚಿಕೊಳ್ಳುತ್ತಾ ನಿಜವಾದ ಯುದ್ಧ ಎದುರಿಗೆ ಬಂದಾಗ ಓಡಿಹೋಗುವನು. 'ಉತ್ತರದ ಪೌರುಷ ಒಲೆ ಮುಂದೆ' ಎಂಬ ಗಾದೆಮಾತಿಗೆ ಜನಕನಾಗಿರುವವನು.

ಆದರೆ 'ಜಯ' ಕಾದಂಬರಿಯಲ್ಲಿ ಉತ್ತರ ವಿಭಿನ್ನ ಹೆಣ್ಣಿಗೆ ಲಜ್ಜೆ, ಭಯ, ಶಾಲೀನತೆಗಳನ್ನು ಕೋಮಲತೆಗಳನ್ನು ಸ್ವಭಾವ, ಗುಣಗಳಾಗಿ 'ವಿಧಿ'ಸುವ ಸಾಂಪ್ರದಾಯಿಕ ಸಮಾಜ ಗಂಡನ್ನು ಪೌರುಷದ ಮೂರ್ತಿಯನ್ನಾಗಿ ನೋಡಬಯಸುತ್ತದೆ. ಶೌರ್ಯ, ನಿಷ್ಕರುಣ ಹೋರಾಟಗಳನ್ನು ಒಲ್ಲದಂತಹ ಉತ್ತರನಂತಹ ಸುಕುಮಾರ ಮನೋಧರ್ಮದ ಕಿರಿವಯಸ್ಸಿನ ಯುವಕ ಈ ಸಮಾಜದಲ್ಲಿ ಗೇಲಿಗೊಳಗಾಗುತ್ತಾನೆ. ಸಮಾಜದೊಂದಿಗಿನ ಯುದ್ಧದಲ್ಲಿ ಕೊಲ್ಲಲ್ಪಡುತ್ತಾನೆ. ಯುದ್ಧದ ಮೊದಲ ದಿನವೇ ಕೊಲ್ಲಲ್ಪಡುವುದು ಈ ಮೌಲ್ಯಗಳ ಸಂಘರ್ಷದ ದೃಷ್ಟಿಯಿಂದ ಅದ್ಭುತವಾಗಿದೆ. ಪುರುಷ ಛಲದ ಹೆಣ್ಣನ್ನು ಅವಮಾನಿಸುವ, ತೇಜೋವಧೆ ಮಾಡುವ ಸಮಾಜ ಹೆಂಗರುಳಿನ ಗಂಡನ್ನು ಸಹ ತೇಜೋವಧೆ ಮಾಡುತ್ತದೆ. ಉತ್ತರ, ಶೂರನ ಮುಂದೆ ಬಹುಮಾನದಂತೆ ಇಡಲ್ಪಡುವ ವೀರಸ್ವರ್ಗವನ್ನು ನಿರಾಕರಿಸುತ್ತಾನೆ. ಉತ್ತರನಿಗೊಂದು ಘನವಾದ ತಾತ್ತ್ವಿಕತೆ ಇದೆ. ಆದರೆ ಯುದ್ಧದ ಸನ್ನಿಯ ಎದುರು ಅದಕ್ಕೆ ಬೆಲೆಯಿಲ್ಲ. ಅದು ಅವನಿಗೂ ಗೊತ್ತಿದೆ.

'ಬೆತ್ತಲೆ ರಾಜ್ಯದಲ್ಲಿ ಬಟ್ಟೆಯುಟ್ಟವರೇ ಹುಚ್ಚರು' ಎಂಬ ಅವನ ವಿಷಾದದ ಮಾತು ಅದನ್ನು ಪುಷ್ಟೀಕರಿಸುತ್ತದೆ. ಪುರುಷನೊಳಗಿನ ಕೋಮಲತೆ, ಮಾರ್ಧವಗಳನ್ನು ಯುದ್ಧ ಮತ್ತು ಪುರುಷ ರಾಜಕಾರಣ ಕೊಲ್ಲುತ್ತದೆ ಎನ್ನುವುದಕ್ಕೆ ಉತ್ತರನ ಸಾವು ಒಂದು ರೂಪಕ.

ಹಾಗೇ ಅಭಿಮಾನ್ಯ ಉತ್ತರನೆಂಬ ಪುರುಷ ನಾಣ್ಯದ ಇನ್ನೊಂದು ಮುಖ. ತನಗೆ ತಿಳಿಯದೆಂದರೆ, ತಾನು ಯುದ್ಧವನ್ನು ಒಲ್ಲೆನೆಂದರೆ ತನ್ನನ್ನು ಉತ್ತರನನ್ನು ಗೇಲಿ ಮಾಡುವಂತೆ ಗೇಲಿ ಮಾಡುವರೋ ಎಂಬ ಭಯದಲ್ಲಿ ತನ್ನ ಶೌರ್ಯವನ್ನು ಮೆರೆಯಬೇಕೆನ್ನುವ ಆಸೆಯಲ್ಲಿ ಅಭಿಮಾನ್ಯು ಮಹಾತ್ವಾಕಾಂಕ್ಷೆಗೆ ಬಲಿಯಾಗುತ್ತಾನೆ. ಉತ್ತರ ಮತ್ತು ಅಭಿಮಾನ್ಯುಗಳು ಈ ಯುದ್ಧದಲ್ಲಿ ಬಲಿಯಾಗುವುದು. ಕಾದಂಬರಿಕಾರ ಬರವಣಿಗೆಯಲ್ಲಿ ಒಂದು ಅದ್ಭುತ ಕಾವ್ಯಾತ್ಮಕತೆಯನ್ನು ತಂದಿದೆ.

ಇಂತಹುದೇ ಇನ್ನೊಂದು ತಾತ್ತ್ವಿಕತೆಯನ್ನು ಅನಾವರಣಗೊಳಿಸುವ ಪಾತ್ರ ಭೀಷ್ಮನ ಪಾತ್ರ. ಭೀಷ್ಮ ಪ್ರಪಂಚದ ಕಣ್ಣಿಗೆ ಬ್ರಹ್ಮಚಾರಿ, ಮಹಾಶೂರ, ನಿಷ್ಠುರ ಯೋಧ, ಕಣ್ಣಿವೆ ಮುಚ್ಚಿ ತೆಗೆಯುವುದರೊಳಗೆ ಪಾಂಡವರ ಸೇನೆಯನ್ನು ಸವರಿ ಸವರಿ ಹಾಕುವವನು. ಭೀಷ್ಮನ ಪಾತ್ರದಲ್ಲಿ ಹೂವಿನ ಸುಗಂಧದಂತೆ ಕಂಡರೂ ಕಾಣದ ಅಂಶವೊಂದಿದೆ. ಅದು ಆ ಮಹಾಪ್ರತಾಪ ಯೋಧನ ಮನಸ್ಸಿನಲ್ಲಿ ಒಬ್ಬಳು ತಾಯಿ

ಇದ್ದಾಳೆ ಇನ್ನುವುದು. ತನ್ನೊಳಗಿನ ಶಿಶುವನ್ನು ವೈಯಕ್ತಿಕ ಸಂಬಂಧಗಳ ಆರ್ದ್ರತೆಯನ್ನು ಜೀವಂತವಾಗಿಟ್ಟುಕೊಂಡಿರುವ ಅರ್ಜುನನ ನುಡಿಗಳಲ್ಲಿ ಭೀಷ್ಮನಲ್ಲಿ ತಾಯಿ ವ್ಯಕ್ತಿತ್ವ ಅನಾವರಣಗೊಳ್ಳುತ್ತದೆ. ಮಣ್ಣಾಟವಾಡುತ್ತ ಅದೇ ಕೈಗಳಲ್ಲಿ ತನ್ನ ತೊಡೆಯನ್ನೇರಿ ತನ್ನ ಗಡ್ಡ ಹಿಡಿದೆಳೆಯುವ ತನ್ನ ಬೆಳ್ಳನೆಯ ರೇಷ್ಮೆ ವಸ್ತ್ರವನ್ನು ಮಣ್ಣು ಮಾಡುವ ಶಿಶು ಅರ್ಜುನನನ್ನು ಸಹಿಸಿದಂತೆಯೇ ಅವನ ಬಾಣ ವರ್ಷವನ್ನೂ ಸಹಿಸಿ ಶರಶಯ್ಯೆ ಹಿಡಿಯುವ, ಸಹಿಸುವ, ಪಾಲಿಸುವ, ಪ್ರೀತಿಸುವ ಮೌಲ್ಯಗಳ ಭೀಷ್ಮ ಪ್ರತಿ ಸ್ತ್ರೀಯರಲ್ಲೊಬ್ಬ ಪುರುಷ, ಪ್ರತಿ ಪುರುಷನೊಳಗೊಬ್ಬ ಸ್ತ್ರೀ-ಜೀವಂತವಾಗಿರುತ್ತಾರೆನ್ನುವ ಹೊಸ ತತ್ತ್ವವೊಂದಕ್ಕೆ ಪ್ರತೀಕವಾಗಿದ್ದಾನೆ.

ಹೀಗೆ ಕಾದಂಬರಿ ಪುರುಷ ಪಾತ್ರಗಳನ್ನು ಒಂದು ವಿಭಿನ್ನ ಬೆಳಕಿನಲ್ಲಿ ಕಂಡಿದೆ. ಆ ತತ್ತ್ವ ಬಹು ನಾಜೂಕಾಗಿ ಪುರುಷ ರಾಜಕಾರಣದಿಂದ ಸಮಾಜದ ಬೆಳವಣಿಗೆಗೆ, ಸ್ವಾಸ್ಥ್ಯಕ್ಕೆ ಆಗುತ್ತಿರುವ ಹಾನಿಯನ್ನು ಅನಾವರಣಮಾಡುತ್ತದೆ. ಸೌಜನ್ಯಶೀಲನಾಗಿ ಅಂತಃಪುರದ ದಾಸಿಯನ್ನೂ ಅಮ್ಮಾ, ಸೋದರಿ ಎಂದು ಕರೆಯುವ ಕರ್ಣದ್ರೌಪದಿಯ ಬಗ್ಗೆ ಸಭೆಯಲ್ಲಿ ತುಟಿಮೀರಿ ಮಾತನಾಡುವುದು ಒಳ್ಳೆಯ ವ್ಯಕ್ತಿಯನ್ನೂ ಪುರುಷಶಕ್ತ ರಾಜಕಾರಣ ಭ್ರಷ್ಟವಾಗಿಸುವ ರೀತಿಯೇ ಆಗಿದೆ. ಕರ್ಣ, ಭೀಷ್ಮ, ಉತ್ತರ, ಅಭಿಮಾನ್ಯು ಪಾತ್ರಗಳು ತಮ್ಮದೇ ವಿಶಿಷ್ಟ ರೀತಿಯಲ್ಲಿ ಸಮಾಜದ ಶಕ್ತ ರಾಜಕಾರಣ ಪುರುಷನ ಅಂತಃರಂಗದ ಕೋಮಲ ರೀತಿಯನ್ನು ಅನಾವರಣ ಮಾಡಿದೆ.

ಯುದ್ಧದಿಂದಾಗಿ ಎಲ್ಲವೂ ನಾಶವಾಗುತ್ತದೆ. ತಮಗೆ ಸಂಬಂಧವೇ ಇರದ ಯುದ್ಧದಲ್ಲಿ ಪಾಲ್ಗೊಂಡು ನಾಶಹೊಂದುವ, ತಮ್ಮನ್ನು ನಂಬಿದವರನ್ನು ನಿರ್ಗತಿಕ-ರನ್ನಾಗಿಸುವ ಕರಾಳ ಚಿತ್ರವನ್ನು ಕಾದಂಬರಿ ಕಟ್ಟಿಕೊಡುತ್ತದೆ. ಯುದ್ಧದ ಕೊನೆಯಲ್ಲಿ ಧರ್ಮರಾಯನಿಗೆ ವೇದೋಕ್ತವಾಗಿ ಪಟ್ಟಾಭಿಷೇಕವಾಗಿ ಪಾಂಡವರೆಲ್ಲರೂ ತಮ್ಮ ತಮ್ಮ ಅರಮನೆಗಳಿಗೆ ತೆರಳಿದರೆ ಕಾಳಶಂಭು ತನ್ನೂರಿಗೆ ಮರಳಿದಾಗ ಇಡೀ ಊರು ನಾಶವಾಗಿರುತ್ತದೆ. ಮತ್ತು ಅವನ ಮದುವೆಗಿದ್ದ ಮಗಳು ಅತ್ಯಾಚಾರಕ್ಕೊಳಗಾಗಿ ಸಾವನ್ನಪ್ಪಿರುತ್ತಾಳೆ.

ಈ ನೆಲೆಯಲ್ಲಿ 'ಜಯ' ಹೆಸರು ಧ್ವನಿಪೂರ್ಣವಾಗಿದೆ. ಒಂದು ಕಡೆ ಈ ಹೆಸರು ಯಾವ ಪವಾಡಗಳೂ ಮತ್ತು ಅಲೌಕಿಕ ವ್ಯಕ್ತಿಘಟನೆಗಳಿಗೂ ಪ್ರಾಯ; ಇಲ್ಲದಿದ್ದ ಮಹಾಭಾರತದ 'ಮೂಲ' ರೂಪವಾದ 'ಜಯ'ವನ್ನು ನೆನಪಿಸುತ್ತದೆ. ಮತ್ತೊಂದೆಡೆ ತೀಕ್ಷ್ಣ ವ್ಯಂಗ್ಯದಿಂದ ಯಾರ ಜಯ? ಎಂಬ ಪ್ರಶ್ನೆಯೆತ್ತುತ್ತದೆ. 'ಜಯ-ಅಪಜಯ', 'ನೀತಿ-ಅನೀತಿ', 'ಧರ್ಮ-ಅಧರ್ಮ' ಇತ್ಯಾದಿಗಳು ತ್ರಿಕಾಲಾಬಾಧಿತ ಸತ್ಯಗಳಲ್ಲ; ಅವುಗಳ ನಿಷ್ಪತ್ತಿ ಅಧಿಕಾರದಲ್ಲಿರುವ ಆಳುವ ವರ್ಗಗಳನ್ನಾಧರಿಸಿ ಬದಲಾಗುತ್ತಾ

ಹೋಗುತ್ತದೆಂಬ ಎಂದೆಂದಿಗೂ ಪ್ರಸ್ತುತವಾಗಿರುವ ಸತ್ಯವನ್ನು ದಟ್ಟ ವಿಷಾದದಿಂದ ಪರಿಣಾಮಕಾರಿಯಾಗಿ 'ಜಯ' ದಾಖಲಿಸುತ್ತದೆ.

'ಜಯ' ಕಾದಂಬರಿಯಲ್ಲಿ ಕಾದಂಬರಿಕಾರರು ಮಾಡಿರುವ ಪಾತ್ರ ವಿಶ್ಲೇಷಣೆ ಸುಸಂಬದ್ಧವಾಗಿ ಹೆಣೆದುಕೊಂಡಿದೆ. ಕಾದಂಬರಿಯ ಭಾಷೆ ಸರಳವಾಗಿದ್ದು ಅಷ್ಟೇ ಬಂಧದಿಂದ ಕೂಡಿ ಕಾದಂಬರಿಗೆ ಅಂದವನ್ನು ತಂದುಕೊಟ್ಟಿದೆ. ಪಾತ್ರಗಳು ತಮ್ಮ ಅಂತರಂಗದಲ್ಲಿ ಮಾತನಾಡಿಕೊಳ್ಳುವಾಗಿದನ ಭಾಷೆ ಮತ್ತು ಚಿತ್ರಣವಂತೂ ಮನಸ್ಸಿಗೆ ಮುದನೀಡುತ್ತದೆ. ಅಲ್ಲದೇ ಹಲವು ಶ್ರೇಷ್ಠ ಚಿಂತನಾಕಾರ್ಯಗಳು ಕಾದಂಬರಿಯಲ್ಲಿ ಒಂದುಗೂಡಿಯೂ ಪ್ರತ್ಯೇಕವಾಗಿ ನಿಂತು ತಮ್ಮ ಅಂತರಂಗದ ಅರ್ಥವಂತಿಕೆಯನ್ನು ಧ್ವನಿಸುತ್ತವೆ.

ಉದಾಹರಣೆಗೆ: 'ಕಬ್ಬಿಣದ ಅಂಗಡಿಯಲ್ಲಿ ನೊಣಕ್ಕೇನು ಕೆಲಸ' ಎನ್ನುವಂತೆ ಕುರುಕ್ಷೇತ್ರದ ಬಳಿಗೆ ಹೆಂಗಸರ ಪ್ರವೇಶ ನಿಷೇಧಿಸಲಾಗಿದೆಯಲ್ಲ ಎಂಬ ಅಭಿಭೂವಿನ ಮನದ ಮಾತು ಅವನ ಅರ್ಥವಂತಿಕೆಯನ್ನು ಚಿತ್ರಿಸುತ್ತದೆ. ಕಾದಂಬರಿಯಲ್ಲಿ ಬರುವ ಎಲ್ಲಾ ಪಾತ್ರಗಳು ಅವುಗಳು ಎದುರಾಗುವ ಸಂದರ್ಭದ ಹಿನ್ನೆಲೆಯಲ್ಲಿ ತಮ್ಮ ನೆನಪನ್ನು ಬಿಚ್ಚಿಕೊಳ್ಳುತ್ತವೆ. ಆ ಮೂಲಕ ಈ ಕಾದಂಬರಿಯಲ್ಲಿ ಸ್ಮರಣ ತಂತ್ರ ಹೆಚ್ಚು ಪ್ರಯೋಜನಕಾರಿಯಾಗಿದೆ. ಭಾಷೆ ಸರಳವಾದದ್ದು, ಶೈಲಿ ಸ್ಮರಣತಂತ್ರದ್ದೂ ಆಗಿದೆ.

ದುರ್ಯೋಧನ ಕರ್ಮದ ಹಾದಿ ಹಿಡಿದು ಕುರುಕ್ಷೇತ್ರದ ಗುರಿಯನ್ನು ಮುಟ್ಟಿದರೆ, ಧರ್ಮರಾಯ ಧರ್ಮದ ಹಾದಿಹಿಡಿದು ತನ್ನೊಂದಿಗಿನ ಜನರ ಸಹಿತ ಕುರುಕ್ಷೇತ್ರವನ್ನು ಬಂದು ಮುಟ್ಟುವ, ದುರ್ಯೋಧನ ಅತಿರೇಕ ಕರ್ಮಫಲವಾದರೆ, ಧರ್ಮರಾಯನದು ಧರ್ಮದ ಅತಿರೇಕದ ಫಲ. ಧರ್ಮವಾಗಲಿ, ಕರ್ಮವಾಗಲಿ ಅತಿರೇಕಕ್ಕೆ ಹೋದಾಗ ತಮ್ಮ ತಮ್ಮ ಗುಣಾತ್ಮಕ ಅಂಶಗಳನ್ನು ಕಲೆದುಕೊಳ್ಳಬಾಕಾಗುತ್ತದೆ. ಇದು ಕಾದಂಬರಿಯು ವಿವರಿಸುವ ಮುಖ್ಯ ಅಂಶವಾಗಿದೆ.

ಕಾದಂಬರಿ ಕಾದಂಬರಿಕಾರರ ಮನೋಭಾವಕ್ಕೆ ದೃಷ್ಟಿಧೋರಣೆಗನುಗುಣವಾಗಿ ರೂಪಿಸುವ ಚಿತ್ರಿಸುವ ಕಾರ್ಯನಿರ್ವಹಿಸಿದ್ದಾರೆ. ತಮ್ಮದೇ ಆದ ರೀತಿಯಲ್ಲಿ ತಂತ್ರ, ಶೈಲಿ, ಭಾಷೆಯನ್ನು ಬಳಸಿ ಕೃತಿರಚನೆ ಮಾಡಿದ್ದಾರೆ

## ಆ) ಎಂ.ಎಸ್.ವೇದಾ ಅವರ ದ್ರೌಪದಿ, ಕುಂತಿ, ಭಾನುಮತಿ, ದುಶ್ಯಲೆ, ಗಾಂಧಾರಿ, ಅಭಿಲಾಷಾ ರೋಹಿಣಿಯವರ ಪಾತ್ರಚಿತ್ರಣ.

**ದ್ರೌಪದಿ:** ದ್ರೌಪದಿ, ದ್ರುಪದರಾಜ ಯಜ್ಞಮಾಡಿ ಕಾಡಿ, ಬೇಡಿ ಪಡೆದ ಅಗ್ನಿಕನ್ಯೆ. ವ್ಯಾಸಭಾರತದಲ್ಲಿ ದ್ರೌಪದಿಯೇ ಕೇಂದ್ರಬಿಂದು. ಅವಳಿಗೆ ಆದ ಅವಮಾನವೇ 'ಮಹಾಭಾರತ'ದ ದುರಂತಗಳಿಗೆಲ್ಲ ಮೂಲ ಕಾರಣವಾಗುತ್ತದೆ ಎಂಬುದನ್ನು ವ್ಯಾಸರು ತುಂಬ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಆದರೆ ಹದಿನೆಂಟು ದಿನಗಳ ಕಾಲ ನಡೆದ ಕುರುಕ್ಷೇತ್ರದ ಯುದ್ಧದ ಅವಧಿಯಲ್ಲಿ ದ್ರೌಪದಿ ವ್ಯಕ್ತಿತ್ವದ ಮನೋಲೋಕದ ವಿವಿಧ ಆಯಾಮಗಳು, ಅವಳಿಗಾದ ಅವಮಾನ, ಅನುಭವಿಸಿದ ವೇದನೆ, ತುಡಿತಮಿಡಿತಗಳನ್ನು 'ಜಯ' ಎಳೆಎಳೆಯಾಗಿ ಅನಾವರಣಗೊಳಿಸುತ್ತದೆ.

ದ್ರೌಪದಿ ವೈಯಕ್ತಿಕ ಯುದ್ಧವನ್ನು ಅಂದೇ ಕೌರವನೆದುರು ಸಾರಿಬಿಟ್ಟಿದ್ದಳು. ಕೇಶ ಎಳೆದು ಸೀರೆಸೆಳೆದ ದುಶ್ಯಾಸನ ಕರುಳ ಬಗೆದು ರಕ್ತವೆಣ್ಣೆಹಚ್ಚಿ, ಅವನ ದಂತದ ಹಣಿಗೆಯಿಂದ ತಲೆಬಾಚಿ ಕರುಳ ಹೂ ಮುಡಿಯುವೆನೆಂದು ಆ ತನಕ ಮುಡಿ ಕಟ್ಟುವುದಿಲ್ಲವೆಂದು, ತೊಡೆತಟ್ಟಿ ಕುಳಿತುಕೊಳ್ಳಲು ಆಹ್ವಾನವಿತ್ತ ದುರ್ಯೋಧನನ ತೊಡೆ ಮುರಿಯುವೆನೆಂದು, ಆದರೆ ಕುರುಕ್ಷೇತ್ರದ ಯುದ್ಧ ಆರಂಭವಾಗಿ ಅಪಾರ ಸಾವು-ನೋವುಗಳು ಸಂಭವಿಸಿದಾಗ ದ್ರೌಪದಿ ಹೆಚ್ಚು ಅಘಾತಕ್ಕೆ ಒಳಗಾಗುತ್ತಾಳೆ. ಇವೆಲ್ಲಕ್ಕೂ ಆದಿ ನಾನೇ ಎಂದು ತನ್ನನ್ನು ತಾನು ಶಪಿಸಿಕೊಳ್ಳುತ್ತಾಳೆ. ಉಪ್ಪು ತಂದವರಿಗಷ್ಟೇ ನೀರು ಕುಡಿಸಲು ಅವಳು ಇಚ್ಛಿಸಿದ್ದಳು. ತಿಂದವರೂ, ತಿನ್ನದವರು ಎಲ್ಲರಿಗೂ ನೀರನ್ನಲ್ಲ ರಕ್ತವನ್ನು ಕುಡಿಸುವ ಈ ಯುದ್ಧವನ್ನಂತೂ ಅವಳು ಖಂಡಿತ ಬಯಸಿರಲಿಲ್ಲ. ಪ್ರತಿ ಸಂದರ್ಭದಲ್ಲಿಯೂ ಕೃಷ್ಣನಲ್ಲಿಯಾಗಲಿ, ಭೀಮ ಅರ್ಜುನರಲ್ಲಾಗಲಿ ಅವಳು ಯುದ್ಧ ಬೇಕೆಬೇಕೆಂದು ಹೇಳುತ್ತಿದ್ದಳು. ಆದರೆ ಈ ಬಗೆಯ ಯುದ್ಧವನಂತೂ ಅಲ್ಲ ಯಾವುದೇ ರೀತಿಯಲ್ಲೂ ಅದರೊಳಗೆ ಭಾಗಿಗಳಾಗದ ಮುಗ್ಧರನ್ನು ಒಳಗೊಳ್ಳುವ ಯುದ್ಧವನಂತೂ ಅಲ್ಲ ಎಂಬುದನ್ನು ಅವಳು ಅನುಭವಿಸುವ ತುಮುಲದ ಮೂಲಕ ಅರ್ಥೈಸಬಹುದು.

ಉತ್ತರಕುಮಾರ, ಅಭಿಮನ್ಯು, ಘಟೋತ್ಕಚರು ಮಡಿದಾಗಲಂತೂ ಇನ್ನು ಯಾರ್ಯಾರ ಸಾವಿಗೆ ಕಾರಣಳಾಗುತ್ತೇನೋ ಎಂದು ದುಃಖಿಸುತ್ತಾಳೆ. ಅಭಿಮನ್ಯು ಮರಣಹೊಂದಿದ ಸಂದರ್ಭದಲ್ಲಿ ದ್ರೌಪದಿಗೆ ಸುಭದ್ರೆಯಾಡುವ ಮಾತು ತುಸು ನೆಮ್ಮದಿಯನ್ನು ತರುತ್ತದೆ. 'ಭೂಮಿಯ ಅಳಿವು ಉಳಿವಿನ ಪ್ರಶ್ನೆಯಲ್ಲಿ ಪುರುಷ ರಾಜಕಾರಣದ ಹಸ್ತಕ್ಷೇಪ ಇದೆಯೇ ವಿನಾ ನನ್ನ ನಿನ್ನ ಬೇಕು ಬೇಡಗಳ ಅಂಶ ಲವಲೇಶವೂ ಇಲ್ಲ. ನಾನು ನೀನೂ ಬರೇ ಸಾಧನಗಳು ಅಷ್ಟೇ'.

ದುರ್ಯೋಧನ, ದುಶ್ಯಸನ, ಕೀಚಕ, ಜಯದ್ರಥರಂಥ ವ್ಯಕ್ತಿಗಳಿಂದ ಅವಮಾನಿತಳಾದ ದ್ರೌಪದಿಯೇ ದಾಯಾದಿಗಳ ಕಲಹಕ್ಕೆ ಕಾರಣವೆಂದು ಲೋಕ ಹೇಳುತ್ತದೆ. ಆದರೆ ತನ್ನನ್ನು ತಾನೇ ನಿಂದಿಸಿಕೊಂಡು ಉಸಿರಾಡುವ ದ್ರೌಪದಿಯ ಮನಃಸ್ಥಿತಿಯನ್ನು ಕುರಿತು ಆಲೋಚಿಸುವುದಿಲ್ಲ. 'ಜಯ' ಅಂಥದೊಂದು ಕೆಲಸವನ್ನು ಮಾಡುತ್ತದೆ. ಸಾಮಂತದೊರೆ ಚಂದ್ರಸೇನ ಪಾಂಡವರ ಪರವಾಗಿ ಯುದ್ಧಕ್ಕೆ ಬಂದು ಕಾಲುಕಳೆದುಕೊಳ್ಳುತ್ತಾನೆ. ಚಿಕಿತ್ಸೆ ಸರಿಯಾಗಿ ಸಿಗದೇ ಹೋದಾಗ ರೋಹಿಣಿ ತನ್ನ ಗಂಡನನ್ನು ಉಳಿಸಿಕೊಳ್ಳಲು ಮುಂದಾಗಿ ಕಾವಲುಗಾರರಿಗೆ ಸಿಕ್ಕಿಹಾಕಿಕೊಳ್ಳುತ್ತಾಳೆ. ಧರ್ಮರಾಯ ಅವರನ್ನು ವಿಚಾರಿಸುವ ಗೋಜಿಗೂ ಹೋಗದೇ ಬಂಧಿಸಲು ಆಜ್ಞೆಮಾಡಿ ಮನುಷ್ಯತ್ವವನ್ನು ಮರೆಯುತ್ತಾನೆ. ಆದರೆ ದ್ರೌಪದಿ ಕುರುಕ್ಷೇತ್ರದಿಂದಾಚೆ ಅವರನ್ನು ಬಿಟ್ಟು ಬರಲು ಆಜ್ಞೆಮಾಡಿ ಮನುಷ್ಯಳಾಗುತ್ತಾಳೆ.

ಕುಂತಿಯ ಸಂದರ್ಭದಲ್ಲಂತೂ ಮಗಳಾಗಿ ಕೌಂತೇಯಳೇ ಆಗುತ್ತಾಳೆ. ಅರ್ಜುನ ಗೆದ್ದು ತಂದ ಹೆಣ್ಣನ್ನು ಹಣ್ಣೆಂದು ಅರ್ಥೈಸಿಕೊಂಡು ಹಂಚಿಕೊಳ್ಳಿ ಎಲ್ಲರೂ ಎಂದ ಕುಂತಿಯನ್ನು ದ್ರೌಪದಿ ದ್ವೇಷಿಸುವುದಿಲ್ಲ. ಆದರೆ ಕರ್ಣನ ವಿಷಯದಲ್ಲಿ ಅವಳಲ್ಲಿ ಆಗುವ ಬದಲಾವಣೆಯನ್ನು ಗಮನಿಸುತ್ತಾ ಬರುತ್ತಾಳೆ. ಕರ್ಣ ಸತ್ತಾಗ ಅವನ ಕಳೇಬರಕ್ಕಾಗಿ ಹುಡುಕಾಡುತ್ತಿದ್ದ ಅತ್ತೆಯನ್ನು ಕಂಡು ನಿಜಸ್ಥಿತಿಯನ್ನು ಅರಿತು ಕುಂತಿಯ ವೇದನೆಯನ್ನು ಕಡಿಮೆಮಾಡುತ್ತಾಳೆ. ಕರ್ಣನ ಕಳೇಬರಕ್ಕಾಗಿ ಅವನ ಸಾಕುತಂದೆ ಅದಿರಥ ಮುಂದಾದಾಗ ಕುಂತಿಯು ಕೊಡುವುದಿಲ್ಲ ಎನ್ನುತ್ತಾಳೆ, ತನ್ನ ಸ್ಥಿತಿಗಾಗಿ ದುಃಖಿಸುತ್ತಾಳೆ. ಆಗಂತು ದ್ರೌಪದಿ ಕುಂತಿಯನ್ನು ಮಗುವಿನಂತೆ ರಮಿಸುತ್ತಾಳೆ. 'ಗಂಗೆಯಲ್ಲಿ ತೇಲಿ ಬಂದ ಮಗುವನ್ನು ಯಾವ ಲೋಕಭಾವನೆಗಳಿಗೂ ಒಳಗಾಗದೆ ಅಪ್ಪಿಕೊಂಡು ಸಲಹಿ, ಹಿರಿಯನನ್ನಾಗಿಸಿದ ಅದಿರಥನಿಗೇ ಅವನ ಸಂಸ್ಕಾರದ ಹಕ್ಕಿರುವುದು. ಪ್ರೀತಿಗಾಗಿ, ವಾತ್ಸಲ್ಯಕ್ಕಾಗಿ ಮಾತ್ರ ಕರ್ಣನನ್ನು ಸತ್ಯವಾಗಿಸಿಕೊಳ್ಳುವ ಅದಿರಥನಿಗೆ ಆ ಹಕ್ಕು ಇರುವುದು. ಈ ಸತ್ಯವನ್ನು ಒಪ್ಪಿಕೊಳ್ಳಿ' ಎಂದು ಹೇಳುವ ಮೂಲಕ ದೊಡ್ಡವಳಾಗುತ್ತಾಳೆ.

ಕುರುಕ್ಷೇತ್ರದ ಯುದ್ಧದಲ್ಲಿ ಒಂದೊಂದು ದಿನವನ್ನು ಯುಗವನ್ನಾಗಿ ಕಳೆಯುವ ದ್ರೌಪದಿ ಪ್ರತಿಯೊಬ್ಬರ ಸಾವಿಗೂ ಮರುಗುತ್ತಾಳೆ. ಧೃತರಾಷ್ಟ್ರನ ನೂರೊಂದು ಮಕ್ಕಳು ಮಡಿದು ಧೃತರಾಷ್ಟ್ರ, ಗಾಂಧಾರಿಯರು ಜೀವಂತ ಶವವಾದಾಗ ಅವರಲ್ಲಿ ಚೈತನ್ಯವನ್ನು ತುಂಬುತ್ತಾಳೆ. 'ಅತ್ತುಬಿಡು ಮಹಾರಾಜ. ಪಾಂಡವರಿಗೆ, ಇದನ್ನೆಲ್ಲಾ ಆಗುಮಾಡಿದ ಎಲ್ಲರಿಗೆ ಏನೇನು ಶಾಪಕೊಡಬೇಕೋ ಕೊಟ್ಟುಬಿಡು ಮಹಾರಾಜ, ಅದು ಆಗಿಬಿಟ್ಟರೆ ನಿನ್ನ ಹೃದಯ, ಮನಸ್ಸುಗಳು ತಿಳಿಯಾಗುತ್ತವೆ. ಇಲ್ಲದಿದ್ದರೆ ದ್ವೇಷ, ಅಸೂಯೆ, ವೈರತ್ವಗಳ ಬಗ್ಗಡದಲ್ಲಿಯೇ ಅವು ಕೊಳೆತು ನಾರಿಬಿಡುತ್ತವೆ. ನಿನ್ನ ದುಃಖವನ್ನು ನಾನು

ಗೌರವಿಸುತ್ತೇನೆ, ಹಂಚಿಕೊಳ್ಳುತ್ತೇನೆ. ಜೊತೆಗೆ ನನ್ನೊಳಗಿನ ಸತ್ಯವನ್ನೂ ಹೇಳುತ್ತೇನೆ ಕೇಳು; ಮಡಿದ ದುರ್ಯೋಧನನ ಇದಿರಲ್ಲಿ ಅವನನ್ನು ಕುರಿತಂತೆ ನನಗಾವ ದ್ವೇಷಭಾವಗಳೂ ಉಳಿದಿಲ್ಲ. ಅವೆಲ್ಲ ಅವನ ಸಾವಿನೊಡನೇ ಸಾವಾಗಿ ಹೋಗಿವೆ. ದುರ್ಯೋಧನನಿಗಾಗಿ ನಾನು ದುಃಖಿಸುತ್ತೇನೆ ಎಂದರೆ ಜಗತ್ತಿರಲಿ ನೀನೇ ನಂಬುವುದಿಲ್ಲ. ಆದರೂ ಅವನಿಗಾಗಿ ನನ್ನಲ್ಲಿಯೂ ಕಂಬನಿ ಇದೆ. ನಿಟ್ಟುಸಿರು ಇದೆ. ದುಡಿದ ನನ್ನ ಮಕ್ಕಳಿಗಾಗಿ, ಅಣ್ಣ, ಅಪ್ಪನಿಗಾಗಿ ದುಃಖಿಸುತ್ತಿದ್ದೇನಲ್ಲ ಅದೇ ಬಗೆಯ ದುಃಖವೂ ಇದೆ' ಎಂದು ಹೇಳುತ್ತಾ ಧೃತರಾಷ್ಟ್ರನ ಕಣ್ಣುಗಳಲ್ಲಿ ಧಾರಾಕಾರವಾಗಿ ಹರಿಯುತ್ತಿದ್ದ ನೀರನ್ನು ತನ್ನ ಸೆರಗಿನಿಂದ ಒರೆಸುತ್ತಾಳೆ. 'ನಿನ್ನೊಳಗಿನ ಸತ್ಯವನ್ನು, ನಿನ್ನ ಮಾತಿನ ಸತ್ಯವನ್ನು ನಾನು ನಂಬುತ್ತೇನೆ ಮಗಳೆ' ಎಂದು ಧೃತರಾಷ್ಟ್ರ ಹೇಳುವಷ್ಟು ಸಮಾಧಾನ ಸಾಂತ್ವಾನವನ್ನು ಹೇಳುತ್ತಾಳೆ. ಹೀಗೆ ರಾಜ್ಯಕ್ಕಾಗಿ ತನ್ನ ಅವಮಾನಕ್ಕಾಗಿ ನಡೆದ ಯುದ್ಧದಲ್ಲಿ ಎಲ್ಲರನ್ನು ಎಲ್ಲವನ್ನು ಕಳೆದುಕೊಂಡು ದುಃಖಿಸುವ ಜೀವಗಳಿಗೆ ಸಮಾಧಾನ ಹೇಳುವ ಮೂಲಕ ತನ್ನ ನೋವು, ಸಂಕಟಗಳನ್ನು ಮರೆಯುವ ದ್ರೌಪದಿ ಆಪ್ತಳಾಗುತ್ತಾಳೆ.

**ಕುಂತಿ:** ಮೂಲಭಾರತದಲ್ಲಿ ಚಿತ್ರಿತವಾಗಿರುವಂತೆಯೇ 'ಜಯ'ದಲ್ಲೂ ಕುಂತಿಯ ಪಾತ್ರ ಚಿತ್ರಿತವಾಗಿದೆ. ಆದರೆ ಕುಂತಿಯ ನೋವು, ನಿರಾಸೆ, ದುಃಖ ಜಿಗುಪ್ಸೆಗಳು ಜಯ ಕಾದಂಬರಿಯಲ್ಲಿ ದಟ್ಟವಾಗಿ ಹರಡಿವೆ. ಬಾಲ್ಯದಲ್ಲಿ ಹುಡುಗಾಟಕ್ಕೆ ದುರ್ವಾಸಮುನಿ ನೀಡಿದ ವರವನ್ನು ಪರೀಕ್ಷಿಸಿ ಕರ್ಣನನ್ನು ಪಡೆದ ಕುಂತಿ ಲೋಕಾಪವಾದಕ್ಕೆ ಹೆದರಿ ನದಿಗೆ ಬಿಟ್ಟು ತಾನು ಮಾಡಿದ ತಪ್ಪಿಗೆ ಜೀವನಪರ್ಯಂತ ಮೌನವಾಗಿ ಶಿಕ್ಷೆಯನ್ನು ಅನುಭವಿಸುತ್ತಾಳೆ. ಪಾಂಡುವನ್ನು ಮದುವೆಯಾಗಿ, ಮಕ್ಕಳಾಗದೆ ಅವನ ಸದ್ಗತಿಗಾಗಿ ತನಗೆ ಇಷ್ಟವಿಲ್ಲದಿದ್ದರೂ ಪಾಂಡುವಿನ ಆಜ್ಞೆಯ ಮೇರೆಗೆ ನಿಯೋಗದಿಂದ ಮಕ್ಕಳನ್ನು ಪಡೆಯುತ್ತಾಳೆ. ಪಾಂಡು ಮರಣ ಹೊಂದಿದಾಗ ಕುಂತಿ ತನ್ನ ಐವರು ಮಕ್ಕಳೊಂದಿಗೆ ರಾಜ್ಯಕ್ಕೆ ಹಿಂತಿರುಗಿತ್ತಾಳೆ. ಕೌರವರಿಂದ ಪಾಂಡವರಿಗೆ ತೊಂದರೆಯಾದಗಲಂತೂ ಕ್ಷಣಕ್ಷಣಕ್ಕೂ ನೊಂದು ಬೇಯುತ್ತಾಳೆ. ಕೌರವ-ಪಾಂಡವರ ನಡುವೆ ಶಸ್ತ್ರಾಸ್ತ್ರ ವಿದ್ಯೆಗಳ ಪ್ರದರ್ಶನದಲ್ಲಿ ಕರ್ಣನ ಆಗಮನವಾದಾಗಲಂತೂ ಬೆವತೂ ನೀರಾಗುತ್ತಾಳೆ. ಎಲ್ಲಿ ವಿಷಯ ರಟ್ಟಾಗಿ ಗೌರವಕ್ಕೆ, ಮಾನಕ್ಕೆ ಪೆಟ್ಟಾಗುವುದೋ ಎಂದು ಚಿಂತಿಸುತ್ತಾಳೆ. ಹಾಗೆ ಕುಲದ ವಿಚಾರವೆತ್ತಿ ಪಾಂಡವರು ಕರ್ಣನನ್ನು ನಿಂದಿಸುವಾಗ ವೇದನೆಯನ್ನು ಅನುಭವಿಸುತ್ತಾಳೆ. ಕುರುಕ್ಷೇತ್ರದ ಯುದ್ಧದಲ್ಲಿ ಕರ್ಣಮಡಿದಾಗ ಅವಳು ಯಾರೊಂದಿಗೂ ಹೇಳಲಾಗದೆ ಅನುಭವಿಸುತ್ತಿದ್ದ ಯಾತನೆಯನ್ನು ದ್ರೌಪದಿಯೊಂದಿಗೆ ಹೇಳುವ ಸನ್ನಿವೇಶ ಹೀಗಿದೆ. 'ಕರ್ಣ ನನ್ನ ಮಗ. ನಾನು ಕನ್ಯೆಯಾಗಿದ್ದಾಗಲೇ ಜನಿಸಿದವನು, ಕಣ್ಣು ತೆರೆವ ಮುನ್ನವೇ ಜನರಿಗೆ ಹೆದರಿ ಗಂಗೆಯಲ್ಲಿ ತೇಲಿ

ಬಿಟ್ಟುಬಿಟ್ಟಿದ್ದೆ. ನಡುನೀರಿನಲ್ಲಿ ಕೈಬಿಟ್ಟ ಆ ನನ್ನ ಕಂದನನ್ನು ನನ್ನವನೆಂದು ಈ ಸಮಾಜಕ್ಕೆ ಹೆದರಿ, ಅವನು ಸಾಯುವ ತನಕವೂ ಮತ್ತೊಬ್ಬರ ಬಳಿ ಬಾಯಿಬಿಡುವ ಧೈರ್ಯ ನನಗಾಗಲಿಲ್ಲ. ನಾನು ಹೆತ್ತ ಕಂದ ಕೆಡುಕಿನ ಹಾದಿಯಲ್ಲಿ ನಡೆದು, ಆಳವಾದ ಮರಣದ ಕಮ್ಮರಿಗೆ ಬೀಳುತ್ತಿದ್ದಾನೆಂದಾಗಲೂ ನನ್ನ ಭೀತಿಯನ್ನು ಕಳೆದುಕೊಂಡು ಸತ್ಯವನ್ನು ಒಪ್ಪಿಕೊಳ್ಳಲಾಗಲಿಲ್ಲ. ಅವನ ಹುಟ್ಟಿಗೆ ಕಾರಣಳಾದ ನಾನೇ ಅವನ ಎಲ್ಲ ನೋವು ಅಪಮಾನಗಳಿಗೂ ಕಾರಣಳಾದೆ. ಕೊನೆಗೆ ಸಾವಿಗೂ ಕಾರಣಳಾದೆ. ಆ ಪಾಪವನ್ನು ನಾನೆಲ್ಲಿ ಕಳೆದುಕೊಳ್ಳಲಿ ಕಂದಾ. ಆ ಪಾಪವೇ ನನ್ನ ಇಡೀ ಬದುಕನ್ನು ಈ ಬಗೆಯ ನರಳಾಟದಿಂದ ಕೂಡಿರುವಂತೆ ಮಾಡಿದೆ. ಈ ಕುಂತಿ ಒಂದು ದಿನ...... ಒಂದೇ ಒಂದು ದಿನ ನೆಮ್ಮದಿಯಿಂದ ಒಂದು ತುತ್ತನ್ನು ಗಂಟಲಿಗೆ ಇಳಿಸುವ ಭಾಗ್ಯವನ್ನು ಹೊಂದಿದ್ದಳಾ? ಕೇಳಿನೋಡು. ಇಂದು ನಿನ್ನೆದುರು ನಿಜ ಹೇಳುತ್ತೇನೆ. ಖಂಡಿತ-ವಾಗಿಯೂ ಇಲ್ಲ. ಪ್ರತಿಬಾರಿಯೂ ಕರ್ಣ ನನ್ನೆದುರು ಬರುವಾಗ ನಿಜವನ್ನು ಕಕ್ಕಿಬಿಡಬೇಕೆಂದುಕೊಳ್ಳುತ್ತಿದ್ದೆ. ಆದರೆ ಭರತಕುಲದ ಮಾನಾಪಮಾನಗಳು, ನನ್ನ ಭೀತಿ ಹಾಗೆ ಮಾಡಗೊಡಲಿಲ್ಲ. ನನ್ನ ನೋವು ನನ್ನ ಶತ್ರುವಿಗೂ ಬಾರದಿರಲಿ. ಈಗಲಾದರೂ ನನ್ನ ಭೀತಿ ಕಳೆದಿದೆಯಾ? ಹೆಣ್ಣಾದ ನಿನ್ನಲ್ಲಿ ಹೊರಚೆಲ್ಲಿದಂತೆ ನನ್ನ ಮಕ್ಕಳ ಎದಿರು ನನ್ನ ಬದುಕಿನ ಸತ್ಯವನ್ನು ಬಿಚ್ಚಿದ್ದರೆ ಅವರು ನನ್ನನ್ನು ಹೇಗೆ ನೋಡಬಹುದೆಂಬುದನ್ನು ಊಹಿಸಲೂ ಸಾಧ್ಯವಾಗುವುದಿಲ್ಲ ನನಗೆ"

"ನಾನೇ ಅವನ ತಾಯಿಯೆಂದು ಅವನಿಗೆ ತಿಳಿದಿತ್ತು. ಪಾಂಡವರೈವರ ಕಾರಣಕ್ಕಾಗಿ ನಾನವನ ತಾಯಿಯಾಗಲಾರೆನೆಂದೂ ಸಹ ಅವನಿಗೆ ಮನವರಿಕೆಯಾಗಿತ್ತು. ಅವರ ವಿಚಾರದಲ್ಲಿ ನಾನು ಪರಮಸ್ವಾರ್ಥಿಯಾಗಿದ್ದೆ. ಯುದ್ಧಕ್ಕೆ ಮುನ್ನ ಅವನ ಬಳಿ ಹೋಗಿ ಪಾಂಡವರನ್ನು ಸಾಯಿಸದಿರುವ ವಚನವನ್ನು ಕೇಳಿದ್ದೆ. ಅದು ಸಾಧ್ಯವಾಗದಾಗ ಅರ್ಜುನನೊಬ್ಬನನ್ನು ಬಿಟ್ಟು ಮತ್ತಾರನ್ನೂ ಕೊಲ್ಲುವುದಿಲ್ಲ ಎಂಬ ವಚನವನ್ನು ಅವನಿಂದ ಪಡೆದುಕೊಂಡು ಬಂದಿದ್ದೆ. ನಿನಗಿನ್ನೂ ತಿಳಿದಿಲ್ಲ. ನಿನ್ನ ಆಸೆಯನ್ನೂ ತೋರಿಸಿ ಕೃಷ್ಣ ನಮ್ಮ ಕಡೆ ಬರಲು ಕರ್ಣನನ್ನು ಆಹ್ವಾನಿಸಿದ್ದ" (ಪುಟ ಸಂಖ್ಯೆ ೨೨೩-೨೨೪).

ಹೀಗೆ ಕುಂತಿ ಕರ್ಣನ ವಿಚಾರವಾಗಿಮೌನವಾಗಿ ನೋವನ್ನು ತಿನ್ನುತ್ತಾಳೆ. ದ್ರೌಪದಿ ಅವಳ ನೋವಿಗೆ ಕಿವಿಯಾದಾಗ ಎಲ್ಲವನ್ನು ಹೊರಹಾಕಿ ನಿರಂಬಳಳಾಗುತ್ತಾಳೆ. ಭೀಷ್ಮ, ದ್ರೋಣ, ಜಯದ್ರಥರನ್ನು ಮೋಸದಿಂದ ಕೊಂದಾಗ ಮಕ್ಕಳ ಪರಾಕ್ರಮಕ್ಕೆ ಹೇಸಿಗೆಪಡುತ್ತಾಳೆ. ಕೊನೆಗೆ ದ್ರೌಪದಿ ಪಟ್ಟಾಭಿಷೇಕವನ್ನು ನಿರಾಕರಿಸಿದಾಗ ಅವಳ ವಿಚಾರದಲ್ಲಿ ಹಸ್ತಕ್ಷೇಪವನ್ನು ಮಾಡದೇ ಮೌನಳಾಗುತ್ತಾಳೆ.

**ಗಾಂಧಾರಿ:** ಧೃತರಾಷ್ಟ್ರನ ಪಟ್ಟಮಹಿಷಿಯಾದ ಗಾಂಧಾರಿ ಸುಬಲರಾಜನ ಮಗಳು. ವಿವೇಕ, ಧರ್ಮಬುದ್ಧಿ, ಸಹಿಷ್ಣುತೆಗಳಿಂದ ಕೂಡಿದ್ದ ಅವಳು ಕೊನೆಗೆ ಪುತ್ರಾದಿಗಳ ಮರಣದಿಂದ ಶೋಕಿಸಿದರೂ ಪಾಂಡವರನ್ನು ಶಪಿಸುವುದಿಲ್ಲ. 'ನಾಭಿಯ ಕೆಳಭಾಗದಲ್ಲಿ ಹೊಡೆದು ಭೀಮ ಅಧರ್ಮ ಮಾಡಿದನೆಂಬುದೇ ನನಗಿರುವ ದುಃಖ' ಎನ್ನುತ್ತಾಳೆ. ಮೂಲಭಾರತದಲ್ಲಿ ಕಾಣಬರದ ಮನದಾಳದ ಮಾತು. 'ಜಯ' ಕಾದಂಬರಿಯಲ್ಲಿ ಕಾಣಸಿಗುತ್ತದೆ. ದುರ್ಯೋಧನನ ಕೆಡಕುಗಳಿಂದ ರೋಸಿ ಹೋಗುತ್ತಿದ್ದ ಭಾನುಮತಿ ಗಾಂಧಾರಿಯ ಬಳಿ ಬಂದು ನಿಮ್ಮ ಮಗನ ಇಂದಿನ ಎಲ್ಲ ದುರ್ನಡತೆಗಳಿಗೂ ನೀವು ಆರೋಪಿಸಿಕೊಂಡ ಈ ನಿಮ್ಮ ಅಂಧತ್ವವೇ ಕಾರಣ ಎಂದು ಆರೋಪಿಸುವ ಸಂದರ್ಭದಲ್ಲಿ ಗಾಂಧಾರಿ ಆಡುವ ಮಾತು ಅವಳ ಅಂತರಂಗದ ಮುಖವನ್ನು ಪರಿಚಯಿಸುತ್ತದೆ. 'ಅಲ್ಲವೇ ಮತ್ತೆ, ಯಾರೂ ಕೆಡುಕಿನ ಜವಾಬ್ದಾರಿ-ಗಳನ್ನು ಹೊರದಿದ್ದಾಗ ಅದು ತಾನಾಗಿಯೇ ಹೆಣ್ಣುಮಕ್ಕಳತ್ತ ಹರಿದುಬಂದು ಬಿಡುತ್ತದ್ದಲ್ಲ. ಅದನ್ನು ನಾವು ಹೆಣ್ಣುಮಕ್ಕಳೂ ರಕ್ತಗತ ಮಾಡಿಕೊಂಡು ಬಿಡುತ್ತೇವಲ್ಲ' ಎಂಬ ಅವಳ ಮಾತು ಮಡುಗಟ್ಟಿರುವ ನೋವು, ನಿರಾಸೆಗಳನ್ನು ಹೊರಚೆಲ್ಲುತ್ತವೆ.

ಕುಲಪ್ರತಿಷ್ಠೆ ಬಾಹುಬಲಗಳ ನೆಪದಲ್ಲಿ ಅಂಧ ಧೃತರಾಷ್ಟ್ರನನ್ನು ಕೈಹಿಡಿದ ಗಾಂಧಾರಿ ತಾನು ಅಂಧಳಾದಳು. ಆದರೆ ಅವಳ ಅಂಧತ್ವಕ್ಕೆ ಪತಿವ್ರತೆಯ ಪಟ್ಟವನ್ನು ಕೊಟ್ಟ ಲೋಕ ಅವಳ ಹೃದಯದ ಮಾತಿಗೆ ಕಿವಿಗೊಡಲಿಲ್ಲ. ಆದರೆ 'ಜಯ' ಗಾಂಧಾರಿಯ ಮನೋಭಾವನೆ, ವೇದನೆಗಳನ್ನು ತೆರೆದಿಡುತ್ತದೆ. ಸುಬಲರಾಜನು ಧೃತರಾಷ್ಟ್ರ ಕುರುಡನಾದರೂ ಭರತವಂಶದ ಹೆಚ್ಚುಗಾರಿಕೆ, ಪರಾಕ್ರಮಕ್ಕೆ ಹೆದರಿಯೇ ಮಗಳನ್ನು ಧಾರೆಎರೆದಿದ್ದನು. ಅಂಧಪತ್ನಿಯನ್ನು ನೋಡಲಾಗದೆ ತನ್ನ ಕಣ್ಣನ್ನು ಬಟ್ಟೆಯಿಂದ ಕಟ್ಟಿಕೊಂಡ ಗಾಂಧಾರಿಯ ನೋವನ್ನು ಕಾದಂಬರಿ ಸೂಕ್ಷ್ಮವಾಗಿ ಧ್ವನಿಸುತ್ತದೆ. ಆದರೆ ಸಮಾಜ ಗಾಂಧಾರಿಯ ಸ್ಥಿತಿಗೆ ಜಯಘೋಷವನ್ನು ಹಾಕಿ ಅವಳನ್ನು ಶಾಶ್ವತವಾಗಿ ಅಂಧಳನ್ನಾಗಿಸಿಬಿಡುತ್ತದೆ. ಭವಿಷ್ಯದ ಬದುಕಿನ ಭಾಗ್ಯದ ಬಗೆಗೆ ಅವಳ ನಿರೀಕ್ಷೆಗಳು, ಭರವಸೆಗಳು ಸತ್ತು ಹೋಗಿದ್ದವು. ಗಾಂಧಾರಿಯೊಂದಿಗೆ ಅವಳ ಹತ್ತು ಮಂದಿ ಸಹೋದರಿಯರೂ ಅಂಧರಾಜನ ಕೈಹಿಡಿದು ಭರತವಂಶವನ್ನು ಬೆಳಗಲು ಬಂದಿದ್ದರು. ಗಾಂಧಾರಿ ತನಗೆ, ತನ್ನವರಿಗೆ ಒದಗಿದ ಸ್ಥಿತಿಗಾಗಿ ಮರುಗುತ್ತಿದ್ದಳು. ಭರತ ವಂಶದವರ ಬಗ್ಗೆ ಅವಳ ಮನಸ್ಸು ಕುದಿಯುತ್ತಿತ್ತು. 'ಪಾಂಡುವಿಗೆ ಮಾದ್ರಿಯನ್ನು ಹೆಚ್ಚು ಹಣಕೊಟ್ಟು ತಂದಾಗ ಹೆಣ್ಣುಮಕ್ಕಳಿಗೆ ಭರತವಂಶದಿಂದಾಗುತ್ತಿದ್ದ ಅವಮಾನಕ್ಕೆ ದುಃಖಿಸಿದ್ದಳು.

ಗಾಂಧಾರಿಗೆ ದಾಂಪತ್ಯ ಜೀವನ ಹೇಗೋ ಬಯಸದೇ ಬಂತೋ ಹಾಗೆಯೇ ಅವಳಿಗೆ ತಾಯ್ತನವು ಬಯಸದೇ ಬಂದಿತು. ಕಾಡಿನಲ್ಲಿ ಪಾಂಡುವಿಗೆ ಐವರು

ಮಕ್ಕಳಾದಾಗ ಕೌರವನಿಗೆ ನೂರೊಂದು ಮಕ್ಕಳಾದರು. ಅಂಧನಾಗಿ ನನಗೆ ಸಿಗದಿದ್ದ ರಾಜ್ಯ ತನ್ನ ಮಕ್ಕಳಿಗಾದರೂ ಸಿಗಲಿ ಎಂಬ ಆಸೆ ಧೃತರಾಷ್ಟ್ರನಿಗಿತ್ತು. ಸಿಂಹಾಸನದ ಹಕ್ಕು ನಿಮಗೆಂದೇ ಮಕ್ಕಳಿಗೆ ಹೇಳಿ ಅವರಲ್ಲಿ ರಾಜ್ಯದಾಸೆಯನ್ನು ಬಿತ್ತಿದ್ದನು. ಪಾಂಡು ಸತ್ತು ಪಾಂಡವರು ಅರಮನೆಗೆ ಬಂದಾಗ ಎಲ್ಲಿ ರಾಜ್ಯ ಕೈತಪ್ಪಿಹೋಗುವುದೋ ಎಂದು ಪಾಂಡವರ ಬಗ್ಗೆ ಕೌರವರಲ್ಲಿ ದ್ವೇಷ ಮೂಡುವಂಥ ಮಾತುಗಳನ್ನೇ ಆಡುತ್ತಿದ್ದನು. ಲೋಕ ಈ ವಿಚಾರದಲ್ಲಿ ನಿಂದಿಸಿದ್ದು ಗಾಂಧಾರಿಯನ್ನೆ. ಗಾಂಧಾರಿ ಮಕ್ಕಳಿಗೆ ಒಳ್ಳೆಯ ದಾರಿಯಲ್ಲಿ ಹೋಗುವಂತೆ ಬುದ್ಧಿ ಹೇಳುತ್ತಿದ್ದರೂ ಧೃತರಾಷ್ಟ್ರ ಅದನ್ನು ವಿರೋಧಿಸುತ್ತಿದ್ದುದು ಯಾರಿಗೂ ತಿಳಿಯಲಿಲ್ಲ. ತಂದೆಯ ಮಾತನ್ನು ಕೇಳುತ್ತಿದ್ದ ಮಕ್ಕಳು ಗಾಂಧಾರಿಯ ಬಳಿ ಬರುತ್ತಲೇ ಇರಲಿಲ್ಲ. ಹೀಗೆ ಗಾಂಧಾರಿ ಗಂಡನೊಂದಿಗೆ, ಮಕ್ಕಳೂ ಇಲ್ಲದ ಜಡತ್ತ್ವದ ಬದುಕನ್ನು ನಡೆಸುತ್ತಿದ್ದಳು.

'ಜಯ' ಕಾದಂಬರಿಯಲ್ಲಿ 'ಗಾಂಧಾರಿ'ಯ ಮನಸ್ಸಿನ ವ್ಯಾಕುಲತೆ ಮಾನಸಿಕ-ವಾಗಿ ಅನುಭವಿಸುತ್ತಿದ್ದ ಯಾತನೆಯು ದಟ್ಟವಾಗಿ ಪ್ರತಿಬಿಂಬಿತವಾಗಿದೆ. ತಂದೆ-ಮಕ್ಕಳ ನಡುವೆ ಬೆಂದುಹೋಗುತ್ತಿದ್ದ ಗಾಂಧಾರಿಯ ಬದುಕು ತೆರೆದುಕೊಳ್ಳುತ್ತದೆ. ಅವರು ಪಾಂಡವರ ಮೇಲೆ ನಡೆಸುತ್ತಿದ್ದ ಅನ್ಯಾಯ, ಅನೀತಿ, ಕೆಡುಕುಗಳನ್ನು ಕೇಳಿದಾಗ 'ತಂದೆಮಕ್ಕಳ ಕೊನೆಯಾಗಿ ಬಿಡಬಾರದಾ' ಎನ್ನುವಷ್ಟರಮಟ್ಟಿಗೆ ಗಾಂಧಾರಿ ರೋಸಿಹೋಗಿದ್ದಳು.

ದ್ರೌಪದಿಯ ವಸ್ತ್ರಾಪಹರಣದಲ್ಲಿ ಸೊಸೆಗಾಗುತ್ತಿದ್ದ ಅಪಮಾನವನ್ನು ತಡೆಗಟ್ಟಲು ಯತ್ನಿಸಿ ವಿಫಲಳಾಗುತ್ತಾಳೆ. ಅಸಹಾಯಕಳಾಗಿ ರೋಧಿಸುತ್ತಾಳೆ. 'ದ್ರೌಪದಿ ನಮ್ಮ ಸೊಸೆ, ಪಾಂಡವರು ನಮ್ಮ ಮಕ್ಕಳು ಈ ಅನ್ಯಾಯವನ್ನು ನಿಲ್ಲಿಸು ಮಹಾರಾಜ' ಎಂದು ಕಂಬನಿ ಮಿಡಿಯುತ್ತಾಳೆ.

ಕುರುಕ್ಷೇತ್ರದ ಯುದ್ಧದಲ್ಲಿ ದುರ್ಯೋಧನ ಮಡಿದಾಗ ಜೀವಂತ ಶವವಾಗುತ್ತಾಳೆ. ತನ್ನೆದುರಿಗೆ ಮಕ್ಕಳಿಗೊದಗಿದ ಸ್ಥಿತಿಗೆ ದುಃಖಿಸುತ್ತಾಳೆ. ಕುರುವಂಶದ ಮಹಿಷಿಯಾದರೂ ತನ್ನ ಮಕ್ಕಳನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲವಲ್ಲ ಎಂದು ವ್ಯಥೆಪಡುತ್ತಾಳೆ. ಒಟ್ಟಾರೆ ಅಂಧ ಪತಿ, ಮಾತು ಕೇಳದ ಮಕ್ಕಳನ್ನು ಕಟ್ಟಿಕೊಂಡು ಜೀವನದುದ್ದಕ್ಕೂ ನರಳುವ ಸ್ಥಿತಿ ಗಾಂಧಾರಿಯದಾಗುತ್ತದೆ. ಹೀಗೆ ಪುರುಷ ರಾಜಕಾರಣದಲ್ಲಿ ನೊಂದು ಬೇಯುವ ಗಾಂಧಾರಿಗೆ ಕೊನೆವರೆಗೂ ಸಿಗುವುದು ದೂಷಣೆ ಮಾತ್ರ ಇದನ್ನು 'ಜಯ' ಒಳಗಣ್ಣಿನಿಂದ ಕಂಡಿರಿಸಿದೆ.

**ಭಾನುಮತಿ:** ಕುರುಕ್ಷೇತ್ರದ ಯುದ್ಧದಲ್ಲಿ ನೊಂದು-ಬೆಂದ ಸ್ತ್ರೀಯರಲ್ಲಿ ಭಾನುಮತಿಯೂ ಒಬ್ಬಳು. ಕುರುಕುಲದ ಮಹಿಷಿ, ದುರ್ಯೋಧನನ ಹೆಂಡತಿ, ಧೃತರಾಷ್ಟ್ರ - ಗಾಂಧಾರಿಯರ ಸೊಸೆ ಇವಿಷ್ಟು ಭಾನುಮತಿಗೆ ವ್ಯಾಸಭಾರತದಲ್ಲಿ ಸಿಗುವ ಪದವಿಗಳು.

ಆದರೆ 'ಜಯ'ದ ವಿಶಿಷ್ಟ ಚಿಂತನೆಯಲ್ಲಿ ಭಾನುಮತಿಯ ಪಾತ್ರ ವಿಭಿನ್ನವಾಗಿ ಮೂಡಿಬಂದಿದೆ. ದುರ್ಯೋಧನನ ದುಷ್ಟ-ಧಮನಕಾರಿ ಕೆಲಸಗಳಿಂದ ರೋಸಿ ಹೋಗುವ ಭಾನುಮತಿ ಪ್ರಶ್ನಿಸುತ್ತಾಳೆ, ದ್ರೌಪದಿಗಾದ ಅವಮಾನಕ್ಕಾಗಿ ಮರುಗುತ್ತಾಳೆ, ದುರ್ಯೋಧನನಲ್ಲಿ ಪ್ರತಿಭಾರಿ ಛಲವನ್ನೇ ಕಂಡಾಗ ಸುಮಂಗಲೀತನವನ್ನೇ ಮರೆಯುತ್ತಾಳೆ.

ಕರ್ಣನ್ನೊಂದಿಗಿನ ಒಂದು ಸಂಭಾಷಣೆಯಲ್ಲಿ ಹೀಗೆ ನುಡಿಯುತ್ತಾಳೆ. "ನನ್ನ ಬದುಕಿನ ಯಾತನೆಯ ನರಕ ನನ್ನ ಶತ್ರುಗಳಿಗೂ ಬಾರದಿರಲಿ ಕರ್ಣ ನನ್ನ ಅರಿಶಿನ ಕುಂಕುಮ ಸೌಭಾಗ್ಯಗಳು ಅಳಿಸಿಹೋಗುತ್ತಿವೆ ಎಂಬ ಆತಂಕ ನನ್ನನ್ನೀಗ ಕಾಡುತ್ತಿಲ್ಲ. ಏಕೆಂದರೆ ಅದು ಹಳೆಯದಾಗಿ ಬಿಟ್ಟಿದೆ. ಒಂದು ಹೆಣ್ಣಿನ ಮಾನದ ಮರ್ಮಕ್ಕೆ ತುಂಬಿದ್ದ ಸಭೆಯಲ್ಲಿ ಎಂತಹ ಆಘಾತಕೊಟ್ಟಿರೋ ಅಂದೇ ನನಗೆ ಆ ಆತಂಕ ನಿವಾರಣೆಯಾಗಿ ಬಿಟ್ಟಿತು. ನನ್ನ ನಿಂದು ಕಾಡುತ್ತಿರುವ ಒಂದೇ ಒಂದು ಆತಂಕವೆಂದರೆ ನನ್ನ ಹಳೆಯ ಆತಂಕ ನಿಜವಾಗುವ ತನಕ ನಿನ್ನ ಗೆಳೆಯನಿಂದ ಇನ್ನು ಏನೇನು ಅನಾಹುತಗಳಾಗುವವೋ, ಆ ಕಾರ್ಯಗಳು ಘಟಿಸಿಬಿಡುತ್ತವೋ ಎಂಬುದು. ನಿಮ್ಮ ನಿಮ್ಮ ಕಾರಣಗಳಿಗಾಗಿ ನೀನು, ಅಜ್ಜಾ, ದ್ರೋಣ, ಕೃಪಾ ಎಲ್ಲರೂ ಅವನನ್ನು ಅವನ ಕೃತ್ಯಗಳನ್ನು ಒಪ್ಪಿಕೊಂಡಿರೇ ವಿನಾ ತಪ್ಪೆನ್ನಲಿಲ್ಲ. ತಪ್ಪೆನ್ನಹೋಗುತ್ತಿದ್ದ ನನ್ನ ಬಾಯನ್ನು ನಿನ್ನ ಗೆಳೆಯ ಮುಚ್ಚಿ ಹಾಕಿಬಿಟ್ಟಿದ್ದಾನೆ. ನಾ ನಿನ್ನೇನು ಮಾಡಲಿ ಮೂಕವಾಗಿ ಮುಂದೆ ಆಗುವುದನ್ನು ಇಂದೇ ಕಾಯುತ್ತಾ ಕೂತುಬಿಟ್ಟಿದ್ದೇನೆ" (ಪುಟ ಸಂಖ್ಯೆ ೭೯) ಎಂಬ ಮಾತಿನಲ್ಲಿ ಭಾನುಮತಿಯ ಸಂಪೂರ್ಣ ಮನಸ್ಸಿನ ಚಿತ್ರಣವನ್ನು ನಾವು ಗ್ರಹಿಸಬಹುದು. ಒಂದು ಅರ್ಥದಲ್ಲಿ ಕೌರವ-ಪಾಂಡವರ ಜಗಳದಲ್ಲಿ ಹೆಚ್ಚು - ಹೆಚ್ಚು ಅವಮಾನಕ್ಕೆ ದ್ರೌಪದಿ ಒಳಗಾಗಿ ನರಕವನ್ನು ಅನುಭವಿಸಿದರೆ ತನ್ನೆದುರಿಗೆ ತನ್ನ ಗಂಡನಿಂದಲೇ ತನ್ನ ನಾದಿನಿಗೆ ಆಗುತ್ತಿದ್ದ ಅವಮಾನವನ್ನು ಕಂಡು ನೊಂದಿದ್ದಾಳೆ, ಬೆಂದಿದ್ದಾಳೆ.

ಭೀಷ್ಮನ ನಂತರದ ಸೇನಾಧಿಪತ್ಯವನ್ನು ಕರ್ಣ ವಹಿಸಿದಾಗ ದುರ್ಯೋಧನನ ಮುಖದಲ್ಲಿ ಜೀವಕಳೆಯನ್ನು ಕಾಣುವ ಭಾನುಮತಿಗೆ ದುರ್ಯೋಧನ, 'ಅರಿಶಿನ ಕುಂಕುಮ ಏನಾಗುತ್ತದೋ ಎಂದು ಕ್ಷಣಕ್ಷಣಕ್ಕೂ ಆತಂಕಪಡುತ್ತಿದೆಯಲ್ಲ ಸೆರೆಸಿಕ್ಕ ಧರ್ಮರಾಯನೊಂದಿಗೆ ಮತ್ತೆ ಜೂಜಾಡುತ್ತೇನೆ, ಸೋಲಿಸುತ್ತೇನೆ, ಮತ್ತೆ ವನವಾಸಕ್ಕೆ ಕಳುಹಿಸುತ್ತೇನೆ. ಆಜೀವ ಪರ್ಯಂತ ಪಾಂಡವರಿಂದ ನಿಷ್ಕಂಟಕವಾದ ರಾಜ್ಯ ನನಗೆ, ಆಜೀವಪರ್ಯಂತ ವನವಾಸ ಅವರಿಗೆ ಹಿಮಾಲಯದ ಕಾಡುಗಳಲ್ಲಿ ಹುಟ್ಟಿದ ಅವರಿಗೆ ಕಾಡುಗಳಲ್ಲಿಯೇ ಮರಣ' ಎಂದು ಹೇಳಿದಾಗ ಅವನ ಮಾತು ಸೂಜಿ ಚುಚ್ಚಿದ ಅನುಭವವನ್ನು ಕೊಡುತ್ತದೆ.

ಧರ್ಮರಾಯ ಜೂಜಾಡಿ ದ್ರೌಪದಿಯೊಂದಿಗೆ ಸಕಲವನ್ನು ಕಳೆದುಕೊಂಡಾಗ ಪಾಂಡವರ ಮೇಲಿನ ದ್ವೇಷಕ್ಕೆ ಬಲಿಯಾಗಬೇಕಾಗಿ ಬಂದವಳು ದ್ರೌಪದಿ ತುಂಬಿದ ಸಭೆಯಲ್ಲಿ ದ್ರೌಪದಿಯ ವಸ್ತ್ರಾಪಹರಣದ ದೃಶ್ಯ, ಅವಾಚ್ಯ ಶಬ್ದಗಳು ಭಾನುಮತಿಯನ್ನು ಜರ್ಜರಿತಗೊಳಿಸುತ್ತದೆ. ಒಂದು ಕಡೆ ಗಂಡನ ಮೇಲೆ ಕೋಪ ಮತ್ತೊಂದೆಡೆ ಧರ್ಮವನ್ನು ನೆಚ್ಚಿ ಕೂತ ಪಾಂಡವರ ಬಗ್ಗೆ ಹೇಸಿಗೆ. ಪಾಂಡವರ ಕೌರವರ ಪುರುಷಾರ್ಥದಲ್ಲಿ ಹೆಣ್ಣು ಬಲಿಯಾಗುವುದನ್ನು ಭಾನುಮತಿ ಸಹಿಸದಾಗುತ್ತಾಳೆ. ಆದರವಳು ನಿಸ್ಸಾಹಾಯಕಳು. ತನ್ನಂತ ಒಂದು ಹೆಣ್ಣಿಗೆ ತನ್ನೆದುರಿಗೆ ಅವಮಾನ-ವಾಗುವುದನ್ನು ಯಾವ ಹೆಣ್ಣು ಇಷ್ಟಪಡುವುದಿಲ್ಲ. ಇದರಿಂದಾಗುವ ನೋವು ಅವಮಾನವನ್ನು ಸ್ತ್ರೀಮನಸ್ಸು ಮಾತ್ರ ಗ್ರಹಿಸಲು ಸಾಧ್ಯ. 'ಜಯ' ಮಾಡಿರುವುದು ಕೂಡ ಅದನ್ನೇ. ದ್ರೌಪದಿಗಾದ ಅವಮಾನ ಸ್ತ್ರೀಕುಲಕ್ಕೆ ಆದ ಅವಮಾನ ಎಂದು ಮನಗಂಡ ಭಾನುಮತಿ ತನ್ನ ಗಂಡನ ದುರಂತವನ್ನು ಅಂದೆ ನಿಶ್ಚಯಿಸುತ್ತಾಳೆ. ಅವನ ಉಳಿವಿಗಾಗಿ ಯಾವ ಭಗವತಿಯನ್ನು ಪ್ರಾರ್ಥಿಸಲೂ ಹೋಗುವುದಿಲ್ಲ. ಆದರೆ ದುರ್ಯೋಧನನಿಂದಾಗಬಹುದಾದ ಕೆಡಕುಗಳನ್ನು ಹಿರಿಯರಿಂದ ತಡೆಗಟ್ಟಲು ಪ್ರಯತ್ನಿಸುತ್ತಾಳೆ. ಭೀಷ್ಮ, ಧೃತರಾಷ್ಟ್ರ, ಗಾಂಧಾರಿಯರಿಗೆ ಮಗನಿಗೆ ಬುದ್ಧಿಹೇಳುವಂತೆ ಕೇಳಿಕೊಳ್ಳುತ್ತಾಳೆ. ಆ ಪ್ರಯತ್ನ ವಿಫಲವಾದಾಗ ದುರ್ಯೋಧನನ ನಾಶವನ್ನು ನಿಶ್ಚಯಿಸುತ್ತಾಳೆ.

ಕುರುಕ್ಷೇತ್ರ ಯುದ್ಧದಲ್ಲಿ ದುರ್ಯೋಧನ ಮರಣಹೊಂದಿದಾಗ, ದ್ರೌಪದಿಯೇ ಕುರುಕ್ಷೇತ್ರ ಯುದ್ಧಕ್ಕೆ ಆದಿ, ಅಂತ್ಯವೆಂದು ಲೋಕ ನಿಂದಿಸುತ್ತಿದೆ. ಇಂದು ದುರ್ಯೋಧನ ಮಡಿದಿದ್ದಾನೆ. ಇನ್ನು ಭಾನುಮತಿಯಿಂದ ಇನ್ಯಾವ ಶಾಪಕ್ಕೆ ಗುರಿಯಾಗಬೇಕಾಗುತ್ತದೋ ಎಂದು ನೋವು, ಸಂಕಟ, ಅನುಮಾನಗಳಿಂದ ಭಾನುಮತಿಯನ್ನು ಎದುರುಗೊಂಡಾಗ ದ್ರೌಪದಿಗೆ ಭಾನುಮತಿಯಿಂದ ಸಿಗುವುದು ಸಂತ್ವಾನದ ಮಳೆ! ಭಾನುಮತಿಯ ಅಂತರಂಗದ ನಿಜವಾದ ದರ್ಶನವಾಗುತ್ತದೆ.

"ಇದಕ್ಕೆಲ್ಲಾ ಕಾರಣನಾದವನ ಮಡದಿಯ ಬಳಿ ಬಂದು ಹೀಗೆ ಕೇಳುತ್ತಿರುವುದು ನಿನ್ನ ದೊಡ್ಡಗುಣ ದ್ರೌಪದಿ ಲೋಕ ಕುರುಕ್ಷೇತ್ರಕ್ಕೆ ದ್ರೌಪದಿಯನ್ನು ಕಾರಣಕರ್ತ-ಗಳನ್ನಾಗಿಸಬಹುದು. ಆದರೆ ಭಾನುಮತಿಯನ್ನಲ್ಲ. ಕುರುಕ್ಷೇತ್ರದ ನೇರ ನೋವಿಗೆ ಒಳಗಾಗಿರುವ ಭಾನುಮತಿಗಿಂತ ಲೋಕದ ಅರಿವು ಹಿರಿದಾ? ಖಂಡಿತಾ ಇಲ್ಲ. ಕುರುಕ್ಷೇತ್ರಕ್ಕೆ ಕಾರಣನಾದ ಗಂಡನಮಡದಿಯಾಗಿ ನಾನು ನಿನ್ನ ಕ್ಷಮೆಯನ್ನು, ಲೋಕದ ಕ್ಷಮೆಯನ್ನು ಕೇಳುತ್ತೇನೆ. ಕ್ಷಮಿಸಬೇಕಾದವಳು ನೀನು' ಎನ್ನುತ್ತಾಳೆ. ಹೀಗೆ ವಿಶಿಷ್ಟ ವ್ಯಕ್ತಿತ್ವವನ್ನು 'ಜಯ'ದ ಭಾನುಮತಿಯಲ್ಲಿ ಕಾಣುತ್ತೇವೆ.

**ಅಭಿಲಾಷಾ:** ಅಭಿಲಾಷಾ ಕಾಶಿರಾಜ ಅಭಿಭೂನ ರಾಣಿ. ವ್ಯಾಸಭಾರತದಲ್ಲಿ ಇವರುಗಳ ಹೆಸರಿದ್ದರೂ ಹೆಸರಿನಾಚೆ ಏನೂ ಇಲ್ಲ. ಆದರೆ ಜಯ ಇವರ ಸಂವೇದನೆಗೆ ವೇದಿಕೆಯಾಗಿದೆ. ಇವರ ಪಾತ್ರಗಳ ಮೂಲಕ ಇಡೀ ರಾಜರ ಅವರ ರಾಣಿಯರ ಬದುಕು–ಬವಣೆಯನ್ನು ಕಟ್ಟಿಕೊಡುತ್ತದೆ. ದಾಯಾದಿಗಳ ಜಗಳಕ್ಕೂ, ತಮಗೂ ಒಂದಕ್ಕೊಂದು ಸಂಬಂಧವೇ ಇಲ್ಲದೇ ಅವರುಗಳ ಪರವಾಗಿ ಹೊರಟ ಗಂಡಂದಿರ ಅಳಿವು–ಉಳಿವುಗಳ ಬಗ್ಗೆ ಕ್ಷಣಕ್ಷಣಕ್ಕೂ ಯೋಚಿಸುತ್ತಾ ಯಾತನೆ ಅನುಭವಿಸುವ ಹೆಣ್ಣುಗಳ ಚಿತ್ರಣವನ್ನು ನೀಡುತ್ತದೆ.

ಅಭಿಲಾಷಾ ಅಭಿಭೂನವನ್ನು ವರಿಸಿದ್ದು ಸ್ವಯಂವರದಲ್ಲಿ ಸ್ತ್ರೀಪುರುಷನ ಆಸ್ತಿಯಾಗಿದ್ದು ಅವನ ಸಂಪೂರ್ಣ ಹಿಡಿತದಲ್ಲಿದ್ದು, ಅವನ ಬೇಕು–ಬೇಡಗಳಿಗೆ ಅನುಗುಣವಾಗಿಯೇ ನಡೆಯಬೇಕಾಗಿದ್ದ ಕಾಲದಲ್ಲಿ ರಾಜಕುಮಾರಿಯರಿಗೆ ಏರ್ಪಡಿಸುತ್ತಿದ್ದ ಸ್ವಯಂವರ ನೆಪವಷ್ಟೆ. ಇಲ್ಲಿ ರಾಜಕುಮಾರರ ಶೌರ್ಯವೇ ಪ್ರಧಾನವಾಗಿರುತ್ತಿತ್ತು. ಸ್ತ್ರೀಯ ಆಸೆ–ಆಕಾಂಕ್ಷೆಗಳಿಗೆ, ಅವಳ ಭಾವನೆಗಳಿಗೆ ಮೌಲ್ಯವೇ ಇರಲಿಲ್ಲ. ಇಂಥ ಸಂದರ್ಭದಲ್ಲಿ ತನಗಾಗಿ ಏರ್ಪಡಿಸಿದ್ದ ಸ್ವಯಂವರದಲ್ಲಿ ಅಭಿಲಾಷಾ ಅಭಿಭೂನವನ್ನು ವರಿಸಿದ್ದಳು. ಅವಳ ಪ್ರಕಾರ ಜೀವನ ನಡೆಸಲು ಬೇಕಾದದ್ದು ಹೃದಯ–ಮನಸ್ಸುಗಳೇ ಹೊರತು ಪುರುಷನ ಶೌರ್ಯವೂ ಅಲ್ಲ ಸೌಂದರ್ಯವೂ ಅಲ್ಲ ಅವಳ ಈ ಮಾತು ಅವಳಲ್ಲಿದ್ದ ಸ್ತೂಪ ಮನಸ್ಸಿನ ಜಾಗೃತ ಪ್ರಜ್ಞೆಯನ್ನು ಸೂಚಿಸುತ್ತದೆ. ಅಲ್ಲದೆ ಸಮಯದ ಕೈಗೊಂಬೆಯಾದ ಸ್ತ್ರೀಯ ಅಸಹಾಯಕತೆಯನ್ನು ಹೇಳುತ್ತದೆ.

ಅಭಿಭೂ ಮಹಾರಾಜ ಪಾಂಡವರ ಪರವಾಗಿ ಕುರುಕ್ಷೇತ್ರ ಯುದ್ಧಕ್ಕೆ ಹೋಗುತ್ತಿರುವ ವಿಚಾರವನ್ನು ಕೇಳಿ ಆತಂಕಕ್ಕೆ ಒಳಗಾಗುತ್ತಾಳೆ. ಯುದ್ಧಕ್ಕೆ ಹೋಗಬೇಡಿರೆಂದು ತಡೆಯುತ್ತಾಳೆ.

'ನಮ್ಮ ದೇಶಕ್ಕೇನಾದರೂ ಆಪತ್ತು ಬಂದಿದೆಯೋ?'

'ಇಲ್ಲ'

'ನಿಮ್ಮ ಹೆಂಡತಿಗೇನಾದರೂ ಆಪತ್ತು ಬಂದಿದೆಯಾ?'

'ಇಲ್ಲ'

'ನಿಮ್ಮ ವಂಶದ ಘನತೆಗೇನಾದರೂ ಕುಂದುಬಂದಿದೆಯಾ?'

'ಇಲ್ಲ'

'ಇವೇನೂ ಇಲ್ಲದೆ ಹೊಸಬಗೆಯ ಶತ್ರುವೇನಾದರೂ ಹುಟ್ಟಿಕೊಂಡಿರ್‍ವಾನ?'

'ಇಲ್ಲ ಇಲ್ಲ ಇಲ್ಲ'

ಮತ್ತೆ ಯಾಕಾಗಿ ನೀವು ಯುದ್ಧಕ್ಕೆ ಹೊರಟಿರುವುದು? ಎಂದು ಗಟ್ಟಿಯಾಗಿ ಪ್ರಶ್ನಿಸುತ್ತಾಳೆ (ಪುಟ ಸಂಖ್ಯೆ ೩) ಅವಳ ಎಲ್ಲ ಪ್ರಶ್ನೆಗಳಿಗೂ 'ಇಲ್ಲ'ವೆಂಬ ಉತ್ತರ ಸಿಗುವುದೇ ಹೊರತು ಮತ್ತೇನೇ ಸಿಗುವುದಿಲ್ಲ. ಅಭಿಭೂ ಯುದ್ಧಕ್ಕೆ ಹೊರಟೇ ಬಿಡುತ್ತಾನೆ. ಇಲ್ಲಿ ಅಭಿಲಾಷಳಲ್ಲಿ ಪ್ರಶ್ನಿಸುವ ಧ್ವನಿ ತಂದಿರುವುದು ಹೊಸ ಬದಲಾವಣೆಯಾಗಿದೆ. ಪಾಂಡವರು – ಕೌರವರ ಬಗ್ಗೆ ಸ್ವಾರಸ್ಯವಾಗಿಯೇ ಅಮ್ಮನಿಂದ ಕಥೆ ಕೇಳುತ್ತಿದ್ದ ಅಭಿಲಾಷಾ ಆ ದಾಯಾದಿಗಳ ನಡುವೆ ರಾಜ್ಯಕ್ಕಾಗಿ ನಡೆಯುವ ಯುದ್ಧಕ್ಕೆ ಈಗ ಸಾಕ್ಷಿಯಾಗಿದ್ದಳು ಹಾಗೂ ಸಹಜವಾಗಿಯೇ ಅವಳಲ್ಲಿ ಆತಂಕವನ್ನು ಹುಟ್ಟಿಸಿತ್ತು. ಅಭಿಭೂವಿಗೆ ಯುದ್ಧ ಶೌರ್ಯದ ಪ್ರತೀಕವಾದರೆ ಅಭಿಲಾಷಳಿಗೆ ಜೀವನದ ಪ್ರಶ್ನೆಯಾಗಿತ್ತು. ಯಾರದೋ ಜಗಳಕ್ಕೆ ತನ್ನ ಗಂಡ ಬಲಿಯಾಗುವುದು ಅವಳಿಗೆ ಇಷ್ಟವಿರಲಿಲ್ಲ. ಕುರುಕ್ಷೇತ್ರಕ್ಕೆ ಕಾರಣಳಾದ ದ್ರೌಪದಿಯನ್ನು ದ್ವೇಷಿಸುತ್ತಾಳೆ. ಗಂಡನನ್ನು ಧರ್ಮರಾಯನ ಅಪ್ಪನ ಕಡೆಗೆ ಕಳುಹಿಸುತ್ತಿರುವುದಕ್ಕೆ ಸಂಕಟಪಡುತ್ತಾಳೆ. ಹೀಗೆ ಗಂಡನ ಮನಸ್ಸನ್ನು ಬದಲಾಯಿಸಲು ವಿಫಲಳಾದ ಅಭಿಲಾಷಾಳಿಗೆ ಅಭಿಭೂವಿನೊಂದಿಗೆ ಯುದ್ಧ ಭೂಮಿಗೆ ಹೋಗಲು ಅವಕಾಶ ಸಿಕ್ಕಿದ್ದಕ್ಕೆ ನಿಟ್ಟುಸಿರು ಬಿಡುತ್ತಾಳೆ.

ಆ ಮಹಾ ಯುದ್ಧಭೂಮಿಯಲ್ಲಿ ಅವಳ ಕಣ್ಣಿಗೆ ಗಂಡ ಅಭಿಭೂವಿನ ಹೊರತು ಮತ್ತೇನೂ ಕಾಣುವುದಿಲ್ಲ ಎಲ್ಲೆಲ್ಲೂ ಅವನ ಮುಖವನ್ನೇ ಕಾಣುತ್ತಾಳೆ. 'ದೇವರೇ ರಾಜಕುಮಾರನಿಗೆ ಏನೂ ಕೆಡಕು ಸಂಭವಿಸದೆ ಹಿಂತಿರುಗಿ ಬರಲಿ' ಎಂದು ಅವಳ ಮನಸ್ಸು ಕ್ಷಣಕ್ಷಣಕ್ಕೂ ಭಗವಂತನಲ್ಲಿ ಮೊರೆ ಇಡುತ್ತಾಳೆ. ಕಾದಂಬರಿಕಾರರು ಅಭಿಲಾಷಾಳ ಈ ತುಡಿತ ಮೂಲಕ ಅಲ್ಲಿದ್ದ ಪ್ರತಿಯೊಬ್ಬ ರಾಣಿಯರ ಬದುಕನ್ನು ಚಿತ್ರಿಸುತ್ತಾರೆ. ಇವರ್‍ಯಾರಿಗೂ ಯುದ್ಧಬೇಡ ಬದಲಾಗಿ ಅವರಿಗೆ ಬೇಕಾಗಿರುವುದು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ಅವರ ಗಂಡಂದಿರ ಉಳಿವಷ್ಟೇ.

ಮೊದಲ ದಿನ ಯುದ್ಧಕ್ಕೆ ತೆರಳಿ ಸಣ್ಣ–ಪುಟ್ಟ ಗಾಯಗಳೂ ಆಗದೆ ಅಭಿಭೂ ಹಿಂದಿರುಗಿದಾಗ ನೆಮ್ಮದಿಯ ನಿಟ್ಟುಸಿರು ಬಿಡುತ್ತಾಳೆ. ರೋಹಿಣಿಯ ಸ್ನೇಹ ಸಿಕ್ಕ ಮೇಲಂತೂ ಅವಳಲ್ಲಿ ಹೊಸ ಚೈತನ್ಯ ಮೂಡುತ್ತದೆ. ಯುದ್ಧ ಮುಗಿದು ನಾನು ನನ ಗಂಡ ಸುರಕ್ಷಿತವಾಗಿ ನಮ್ಮ ರಾಜ್ಯಕ್ಕೆ ಹಿಂದಿರುತ್ತೇವೆ ಎನ್ನುವಷ್ಟರ ಮಟ್ಟಿಗೆ ಅವಳಲ್ಲಿ ಆತ್ಮವಿಶ್ವಾಸ ಮೂಡುತ್ತದೆ. ಕುರುಕ್ಷೇತ್ರದ ಯಾವುದೇ ದಿಕ್ಕಿಗೂ ಮುಖ ಮಾಡಿದರೂ ದುಃಖಿತರೇ ಕಾಣುವ ಲೋಕದಲ್ಲಿ ಅಭಿಲಾಷಾ ರೋಹಿಣಿಯರು ನಗೆಯ ಹೂಗಳನ್ನು ಅರಳಿಸುವವರಾಗುತ್ತಾರೆ. ಯೌವ್ವನ, ಚೆಲುವು, ಮುಗ್ಧತೆಯನ್ನು ಈ ಪಾತ್ರಗಳಲ್ಲಿ ನಾವು ಕಾಣಬಹುದು.

ದ್ರೌಪದಿಯನ್ನು ಹತ್ತಿರದಿಂದ ಕಂಡು ಅವಳ ಮನಸ್ಸಿನ ಸ್ಥಿತಿಯನ್ನು ತಿಳಿದಾಗ ಅಭಿಲಾಷಾ 'ಇಂದು ನೀವೇ ದುರ್ಯೋಧನನ್ನು ಹುಡುಕಿಕೊಂಡು ಹೋಗಿ ಯುದ್ಧಮಾಡಿ ಸೋಲಿಸಿ ಬಂದು ಬಿಡಿರಿ, ದ್ರೌಪದಿ ದೇವಿಯರಿಗೆ ಸಂಪೂರ್ಣ ಸಮಾಧಾನ ಕೊಟ್ಟ ಕೀರ್ತಿ ನಿಮಗೆ ಸೇರುತ್ತದೆ. ಪಾಂಡವರು ನಿಮ್ಮನ್ನು ಮೆಚ್ಚುಗೈಯುತ್ತಾರೆ' ಎಂಬ ಅವಳ ಮಾತು ಅವಳಲ್ಲಿನ ಮುಗ್ಧತೆಯನ್ನು ಸೂಚಿಸುತ್ತದೆ, ಇಂಥ ಮುಗ್ಧ ಮನಸ್ಸಿಗೆ ರೋಹಿಣಿಯ ಗಂಡ ಚಂದ್ರಸೇನ ಯುದ್ಧದಲ್ಲಿ ಕಾಲು ಕಳೆದುಕೊಂಡು ಮರುಳುವುದು ಮೊದಲ ಆಘಾತವನ್ನು ಕೊಡುತ್ತದೆ, ಕಾಳಶಂಭುವಿನ ಈ ಕುರುಕ್ಷೇತ್ರ ಯುದ್ಧ ಯಾರಿಗೆ ತಾನೇ ನಾಳೆಗಳ ಕನಸ್ಸನ್ನು ಕೊಡಲು ಸಾಧ್ಯ ತಾಯಿ ಭೀಷ್ಮ, ದ್ರೋಣ, ಅಭಿಮನ್ಯು, ಘಟೋತ್ಕಚ ಮುಂತಾದ ಅತಿರಥ ಮಹಾರಥರ ನಾಳೇಗಳೇ ಖೊಟ್ಟಿಯಾಗಿ ಬಿಟ್ಟಾಗ ಇನ್ನ ನಮ್ಮಂಥವರ ನಾಳೆಗಳೇನು ನಂಬಿಕೆ" ಎನ್ನು ಮಾತುಗಳು ಅವಳ ಮನಸ್ಸನ್ನೇ ಅಲ್ಲೋಲ ಕಲ್ಲೋಲ ಮಾಡುತ್ತದೆ. ಈ ಸತ್ಯದ ಹುಡುಕಾಟದಲ್ಲಿದ್ದ ಅಭಿಲಾಷಾಳಿಗೆ ಗಂಡನ ಸಾವು ಸಿಡಿಲು ಬಡಿದಂತಾಗಿ ಬುದ್ಧಿಭ್ರಮಣೆಗೊಳಗಾಗುತ್ತಾಳೆ. ಒಟ್ಟಾರೆ ಮೂಲ ಭಾರತದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಸಾಮಾನ್ಯ ಪಾತ್ರಗಳ ಬದುಕನ್ನ ಮನಮಿಡಿಯುವಂತೆ ಕಟ್ಟಿಕೊಡುತ್ತದೆ 'ಜಯ'.

**ರೋಹಿಣಿ:** ರೋಹಿಣಿ ಚಂದ್ರಸೇನನ ಹೆಂಡತಿ. ಕಾಶಿರಾಜ ಅಭಿಭೂವಿನ ಸಾಮಂತನಾದ ಚಂದ್ರಸೇನ ತನ್ನ ದೊರೆಯ ಆಜ್ಞೆಯ ಮೇರೆಗೆ ಕುರುಕ್ಷೇತ್ರ ಯುದ್ಧಕ್ಕೆ ಧಾವಿಸುತ್ತಾನೆ. ಈ ಯುದ್ಧದಿಂದಾಗಿ ಅಭಿಭೂವಿನ ರಾಣಿ ಅಭಿಲಾಷಾ ರೋಹಿಣಿಯ ಆಪ್ತ ಗೆಳತಿಯಾಗುತ್ತಾಳೆ. ಅಭಿಲಾಷಾ ವಾಸ್ತವ ಸ್ಥಿತಿಯನ್ನು ಕರಗಿಸಿಕೊಳ್ಳಲಾಗದ ಮುಗ್ಧೆ. ಯುದ್ಧಾನಂತರ ನಾನು ತನ್ನ ರಾಜಕುಮಾರ ಸುರಕ್ಷಿತವಾಗಿಯೇ ರಾಜ್ಯವನ್ನು ಸೇರುತ್ತೇವೆ ಎಂಬ ಆತ್ಮವಿಶ್ವಾಸದಲ್ಲಿದ್ದವಳು, ದೇವರೆ ನನ್ನ ರಾಜಕುಮಾರನಿಗೆ ಯಾವುದೇ ತೊಂದರೆಯಾಗದಿರಲೆಂದು ಮೊರೆಯಿಡುತ್ತಿದ್ದವಳು. ಆದರೆ ರೋಹಿಣಿಯದು ವಿಭಿನ್ನವಾದ ವ್ಯಕ್ತಿತ್ವ. ಸಾಮಂತದೊರೆಯಾದ ತನ್ನ ರಾಜನನ್ನು ಕುರುಕ್ಷೇತ್ರ ಯುದ್ಧಕ್ಕೆ ಹೋಗಬೇಡ ಎನ್ನಲಾಗದೆ ಅವನನ್ನು ಹಿಂಬಾಲಿಸಿದ್ದಳು. 'ಏನೇ ಬರಲಿ, ಬರುವುದು ಬೇಡ ಎಂದು ಬೇಡುವುದಿಲ್ಲ ಭಗವಂತ ಬಂದಿದ್ದನ್ನು ಎದುರಿಸುವ ಎದೆಗಾರಿಕೆ, ಎದೆಗುಂಡಿಗೆ ಕೊಡು' ಎನ್ನುವ ಪ್ರಬುದ್ಧಳು. 'ವೀರಮರಣ ಹೊಂದಿದಾಗ ನನ್ನ ಗಂಡನಿಗಿಂತ ಮೊದಲೇ ನಾನು ಸ್ವರ್ಗಕ್ಕೆ ಹೋಗಿ ಅವನನ್ನು ರಂಭೆ, ಊರ್ವಶಿಯರ ಪಾಲು ಮಾಡದೆ ಸ್ವಾಗತಿಸಬೇಕು' ಎನ್ನುವ ಸ್ವಭಾವದವಳಲ್ಲ, ಅಂಥ ವಿಚಾರದಲ್ಲಿ ನಂಬಿಕೆಯನ್ನು ಇಟ್ಟವಳಲ್ಲ. ಗಂಡನನ್ನು ಕಳೆದುಕೊಂಡು ಒಬ್ಬಳೇ ರಾಜ್ಯಕ್ಕೆ ಹಿಂದಿರುಗುವ ಸತ್ಯವನ್ನು ಅರಗಿಸಿಕೊಳ್ಳುವವಳೂ ಅಲ್ಲ. ಆದರೆ ವಾಸ್ತವದ ನೆಲೆಯಲ್ಲಿ ಬದುಕು ನಡೆಸುವ ಸ್ವಭಾವದವಳು. ಚಂದ್ರಸೇನ ಯುದ್ಧದಲ್ಲಿ ಒಂದು ಕಾಲು

ಕಳೆದುಕೊಂಡು ಹಿಂದಿರುಗಿದ್ದಾಗ ಸತ್ಯವನ್ನು ಒಪ್ಪಿಕೊಂಡು ಗಂಡ ಚೇತರಿಸಿಕೊಂಡ ತಕ್ಷಣ ರಾಜ್ಯಕ್ಕೆ ಮರಳಿ ಅವನಿಗೆ ಊರುಗೋಲಾಗಿ ಬಾಳಲು ನಿಶ್ಚಯಿಸುತ್ತಾಳೆ. ಅಭಿಲಾಷಳಲ್ಲಿ ಅದನ್ನು ಸಮರ್ಥಿಸಿಕೊಳ್ಳುತ್ತಾಳೆ. ಎಂತೆಂಥ ವೀರರ ಕಥೆಗಳೇ ಹೇಗಾಗುತ್ತಿದೆ ಎಂದು ನೀನೇ ನೋಡುತ್ತಿದ್ದೀಯಲ್ಲ. ಭೀಷ್ಮ ಪಿತಾಮಹನಂಥವರು ಶರಶಯ್ಯೆಯ ಮೇಲಿದ್ದಾರೆ. ದ್ರೋಣರಂಥವರು ಮಡಿದಿದ್ದಾರೆ. ಅಭಿಮಾನ್ಯು ಘಟೋತ್ಕಚರೇನು ಸಾಮಾನ್ಯರೆ? ಓರ್ವಹೊಟ್ಟೆಯಲ್ಲಿರುವಾಗಲೇ ಯುದ್ಧ ಪಾಠ ಕೇಳಿದವನು ಮತ್ತೊಬ್ಬ ಅಸಹಾಯ ಬಲವಂತ ಇಂಥಿಂಥವರೆ ವೀರಸ್ವರ್ಗವನ್ನು ದಿನದಿನವೂ ಏರುತ್ತಿರುವಾಗ ನನ್ನ ಪತಿಯಂಥ ಸಾಮಾನ್ಯ ಸಾಮಂತ ಕುರುಕ್ಷೇತ್ರ ಯುದ್ಧದಲ್ಲಿ ಇಷ್ಟು ದಿನಗಳು ಸಾಗಿಸಿಬಂದಿದ್ದೆ ಮಹಾಸಾಧನೆ' ಎನ್ನುವ ದಿಟ್ಟ ಮನಸ್ಸಿನವಳು.

ಚಂದ್ರಸೇನನಿಗೆ ಸರಿಯಾದ ಚಿಕಿತ್ಸೆ ಸಿಗದೇ ಕಾಲು ನಂಜೇರುತ್ತದೆ. ತನ್ನ ಬಳಿ ಇದ್ದ ವಸ್ತುಗಳನ್ನೆಲ್ಲ ಶಿಬಿರದ ವೈದ್ಯನಿಗೆ ಕೊಟ್ಟು ಚಿಕಿತ್ಸೆ ಕೊಡಿಸಿದ ರೋಹಿಣಿ ಗಂಡ ಚೇತರಿಸಿಕೊಳ್ಳದ ಸ್ಥಿತಿ ಕಂಡು ಕಂಗಾಲಾಗುತ್ತಾಳೆ. ಇಂಥ ಅಸಹಾಯಕ ಸ್ಥಿತಿಯಲ್ಲಿ ಶಿಬಿರದ ವೈದ್ಯ ಅವಳ ಶೀಲವನ್ನು ಪಡೆಯಲು ಮುಂದಾದ ಸೂಕ್ಷ್ಮತೆಯನ್ನು ಗ್ರಹಿಸಿದ ರೋಹಿಣಿ ತನ್ನ ಹಾಗೂ ತನ್ನ ಗಂಡನ ಉಳಿವಿಗಾಗಿ ಯುದ್ಧಭೂಮಿಯಿಂದ ಪಲಾಯನ ಮಾಡುತ್ತಾಳೆ. ಇವಳ ನೆರವಿಗೆ ಕಾಳಶಂಭು ಸಿಕ್ಕಾಗಲಂತು ಹೊಸ ಭರವಸೆ ಅವಳಲ್ಲಿ ಮೂಡುತ್ತದೆ. ಆದರೆ ಕಾವಲುಗಾರನಿಗೆ ಸಿಕ್ಕಿ ಬಿದ್ದು ಧರ್ಮರಾಯ ಇಬ್ಬರನ್ನು ಬಂಧನದಲ್ಲಿಡುವಂತೆ ಆಜ್ಞೆ ಮಾಡಿದಾಗ ಅಲ್ಲಿದ್ದ ದ್ರೌಪದಿಯನ್ನು ಕೇಳಿಕೊಳ್ಳುವ ಸನ್ನಿವೇಶ ಹೀಗಿದೆ.

ದೇವಿ ನನ್ನನ್ನು ಇಲ್ಲಿ ಉಳಿಸಿಕೊಳ್ಳಬೇಡಿರಿ. ನನ್ನ ಪತಿ ಸಾವು ಬದುಕಿನ ನಡುವೆ ಹೋರಾಡುತ್ತಿದ್ದಾರೆ. ನನ್ನದೇನು ತಪ್ಪು ಹೇಳಿರಿ ಅವರನ್ನು ಉಳಿಸಿಕೊಳ್ಳಲಷ್ಟೇ ನಾನು ಇಲ್ಲಿಂದ ಹೊರಟಿದ್ದು, ಮತ್ತಾವ ರಾಜಕಾರಣಗಳೂ ನನಗಿಲ್ಲ. ನೀವುಗಳು ನಡೆಸುತ್ತಿರುವ ಈ ರಾಜಕಾರಣ ಈ ಯುದ್ಧ ಈ ಯಾವುದರ ಬಗೆಗೂ ನನಗೆ ಉಭಶುಭ ಗೊತ್ತಿಲ್ಲ. ಒಮ್ಮೆ ಬಂದು ನೋಡಿರಿ. ಸಾವು–ಬದುಕಿನ ನಡುವೆ ನನ್ನವರೂ ರಥದಲ್ಲಿ ಹೇಗೆ ಬಿದ್ದಿದ್ದಾರೆ ಎಂದು ಅವರನ್ನು ಉಳಿಸಿಕೊಳ್ಳಲು ಏನೆಲ್ಲಾ ಕಷ್ಟಪಟ್ಟೆ ಇಲ್ಲಿ ನೋಡಿ ದೇವಿ ಸೆರಗಿನ ಒಳಗಡೆ, ಹೆಣ್ಣಿಗೆ ಮಂಗಳದ ಸಂಕೇತವಾದ ಮಾಂಗಲ್ಯವೂ ನನ್ನ ಬಳಿಯಲ್ಲಿ ಉಳಿದಿಲ್ಲ ಯಾಕೆ? ನನ್ನ ಮಾಂಗಲ್ಯ ಉಳಿಸಿಕೊಳ್ಳಬೇಕು ನಾನು. ಇಷ್ಟು ದಿನವಾಯಿತಲ್ಲ ನನ್ನ ಪತಿಯ ಬಗೆ ವಿಚಾರಿಸಲು ಯಾರಾದರೂ ಬಂದಿರಾ? ಶಿಬಿರದ ವೈದ್ಯ ನನ್ನ ಮಾನವನ್ನೇ ಒತ್ತೆ ಇಡಲು ಅಪೇಕ್ಷಿಸಿದ. ಆಕಸ್ಮಾತ್ ನಾನು ಇಲ್ಲೇ ಇದ್ದರೆ ನಾನು ಅದಕ್ಕೂ ಸಿದ್ಧಳಾಗಿ ಬಿಡುತ್ತೀನೆನೋ ಎಂಬ ಭಯ ನನ್ನನ್ನು

ಆವರಿಸಿಕೊಂಡಿದೆ. ಆದಷ್ಟು ಶೀಘ್ರ ನನ್ನ ರಾಜ್ಯಕ್ಕೆ ನಾನೀಗ ಹಿಂತಿರುಗಬೇಕು. ನನ್ನ ಪತಿಯನ್ನು ಉಳಿಸಿಕೊಳ್ಳಬೇಕು. ನಾನು ಉಳಿಯಬೇಕು. ದಯಮಾಡಿ ನನ್ನನ್ನು ಹೋಗಲು ಬಿಡಿ. ನಿಮ್ಮ ಯುದ್ಧ ಎಂದು ಮುಗಿದೀತು ಬದುಕು ಮತ್ತು ಸಾವು ನಿಮ್ಮನ್ನೆಲ್ಲಾ ಕಾಯುತ್ತಾ ಕುಳಿತ್ತಿರುತ್ತದೆಯಾ? ಸಾವು ಒಟ್ಟಿಗೆ ಒಂದೇ ಬಾರಿಗೆ ಬಂದುಬಿಟ್ಟರೆ ಕಷ್ಟವಿಲ್ಲ. ನಮಗೆ ಬೇಕಾದವರ ಸಾವು ನಮ್ಮ ಕಣ್ಣೇದುರಿಗೆ ಕೊಂಚ ಕೊಂಚವೇ ಹತ್ತಿರ ಬರುವುದು ನೋಡುತ್ತಾ ನಾವು ಕೂರುವುದು ಜಗತ್ತಿನ್ನೆಲ್ಲಾ ಯಾತನೆಗಳಿಗಿಂತ ಕಠಿಣತರವಾದದ್ದು ದೇವಿ ಆ ಯಾತನೆಯನ್ನು ಸಹಿಸಿ ಸಹಿಸಿ ನನಗೆ ಸಾಕಾಗಿದೆ. ದಯಮಾಡಿ ನನ್ನ ಯಾತನೆಯನ್ನು ಕೊನೆಗೊಳಿಸಿರಿ (ಪುಟ ಸಂಖ್ಯೆ ೨೧೦-೨೧೧)

ಯುದ್ಧದಲ್ಲಿ ಪಾಲ್ಗೊಳ್ಳುವ ವೀರರಿಗಿಂತ, ಆ ವೀರರ ರಾಣಿಯರು ಅನುಭವಿಸುವ ನೋವು, ಸಂಕಟ, ಅವಮಾನ, ಅಸಹಾಯಕತೆಯನ್ನು ಕಾದಂಬರಿ ಹೃದಯಂಗಮವಾಗಿ ಚಿತ್ರಿಸುತ್ತದೆ. ಯುದ್ಧರಂಗದಿಂದ ಪಲಾಯನ ಮಾಡಬೇಕೆಂಬ ಅವಳ ಹಠ. ಎದೆಗಾರಿಕೆ, ಯಶಸ್ಸು ಆಪ್ತವಾಗುತ್ತವೆ. ಆದರೆ ಎಷ್ಟೆಲ್ಲಾ ಪ್ರಯತ್ನ ಮಾಡಿದರೂ ಚಂದ್ರಸೇನ ಉಳಿಯುವುದಿಲ್ಲ. ಚಂದ್ರಸೇನನಿಲ್ಲದೆ ರಾಜ್ಯಕ್ಕೆ ಮರುಳು ಬಯಸದೇ ಮಗಳನ್ನು ಕಳೆದುಕೊಂಡಿದ್ದ ಕಾಳಶಂಭುವಿನ ಮಗಳಾಗುತ್ತಾಳೆ. ಚಮದ್ರಸೇನ ಮಡಿದದ್ದಕ್ಕಾಗಿ ಸಿಗುವ ಪರಿಹಾರ ಸಿಗದೇ ಹೋದಾಗ ಚಿಂತಿಸುವುದೂ ಇಲ್ಲ ನಾವು ಯಾರೆದುರಿಗೂ ಕೈಚಾಚುವುದು ಬೇಡ, ಭೂಮಿ ತಾಯಿಯ ಮಕ್ಕಳಾಗಿ ಬದುಕೋಣ ಎಂದು ಪ್ರಭುತ್ವವನ್ನು ನಿರಾಕರಿಸುತ್ತಾಳೆ. ಹೀಗೆ ಯುದ್ಧಭೂಮಿಯಲ್ಲಿ ಮನಸ್ಥಿತಿಯನ್ನು ಕಾಯ್ದುಕೊಳ್ಳುವ, ವಾಸ್ತವವನ್ನು ನಂಬಿ ಬದುಕನ್ನು ಸ್ವೀಕರಿಸುವ ದಿಟ್ಟೆಯ ಮೂಲಕ ಹೊಸ ಮೌಲ್ಯಗಳನ್ನು ಕಾದಂಬರಿಕಾರರು ಕಟ್ಟಿಕೊಡುತ್ತಾರೆ.

**ದೃಶ್ಯಲೆ:**

ದುರ್ಯೋಧನನ ತಂಗಿ. ವ್ಯಾಸಭಾರತದಲ್ಲಿ ದೃಶ್ಯಲೆಯದು ಒಂದು ಸಾಲಿನ ಪಾತ್ರವಾದರೆ 'ಜಯ' ದಲ್ಲಿ ಕಹಿ ಸತ್ಯವನ್ನು ಅಣ್ಣನಿಗೆ ಮನವರಿಕೆ ಮಾಡಿ ಅವನು ಬಹಳ ನೊಂದುಕೊಳ್ಳುವಂತೆ ಮಾಡುವ ಪಾತ್ರ. ಅರ್ಜುನ ಜಯದ್ರಥನನ್ನು ಕೊಲ್ಲುವುದಾಗಿ ಶಪಥ ಮಾಡಿದಾಗ, ಅವನ ಸಾವಿಗಿಂತ ಮೊದಲೇ ಸುಮಂಗಲಿತನವನ್ನು ತೊರೆದು ಅಣ್ಣನಿಗೆ ಬದುಕಿನ ಪಾಠವನ್ನು ಹೇಳುತ್ತಾಳೆ. ಜಯದ್ರಥನಿಂದ ಯಾವ ಸುಖ ನೆಮ್ಮದಿಗಳನ್ನು ಕಾಣದ ದೃಶ್ಯಲೆ ಅವನಲ್ಲಿದ್ದ ವಿಕಾರ ಕಾಮವನ್ನು ಕಂಡು ಪ್ರತಿಭಟಿಸದೇ ಸಹಜವೆಂಬಂತೆ ಬದುಕಿಗೆ ಮುಖಮಾಡುತ್ತಾಳೆ. ಬಿತ್ತಿದಂತೆ ಬೆಳೆ. ಬಿತ್ತಿದ ಬಿತ್ತನೆಯ ಬೆಳೆಯನ್ನು ಅನುಭವಿಸಬೇಕೆಂದು ತಣ್ಣಗೆ ನುಡಿದು ಜಯದ್ರಥನ ಸಾವನ್ನು ಕಾಯುತ್ತಾಳೆ.

ಹುಟ್ಟಿನಿಂದಲೂ ಅಣ್ಣನ ಛಲ, ಸ್ವಾಭಿಮಾನ ಪಾಂಡವರ ಬಗೆಗಿದ್ದ ಅವನ ದ್ವೇಷ ಅಸೂಯೆಗಳನ್ನು ಕಂಡಂತೆ, ಅವನನ್ನು ತಿದ್ದಲಾಗದ ತಾಯಿ, ಅತ್ತಿಗೆಯ ಅಸಹಾಯಕತೆಯನ್ನು ಕಂಡಿದ್ದಳು. ಅಣ್ಣ, ಅಪ್ಪ ಯಾವಾಗಲೂ ಪಾಂಡವರ ಬಗೆ ವಿರೋಧದ ಮಾತುಗಳನ್ನಾಡಿದರೂ ಅದನ್ನು ನಿಜವೆಂದೇ ನಂಬಿ ಸುಮ್ಮನಿರುತ್ತಿದ್ದಳು. ಆದರೆ ತಮ್ಮ ಹೆಂಡತಿಯನ್ನು ಕದ್ದೊಯ್ದ ಜಯದ್ರಥನನ್ನು ಗಂಧರ್ವರಿಂದ ಬಿಡಿಸಿ ತಂದು ಪ್ರಾಣದಾನ ಮಾಡಿದಾಗ ಪಾಂಡವರ ಸ್ವಭಾವವನ್ನು ಅರಿತು ಅಂದಿನಿಂದ ಅವರ ಪರವಾಗಿ ಮಾತನಾಡುತ್ತಿದ್ದಳು.

ದ್ರೌಪದಿಯ ಅವಮಾನಕ್ಕೆ ಕಾರಣನಾಗಿ, ಪಾಂಡವರ ಪಾಲಿನ ರಾಜ್ಯವನ್ನು ಕೊಡದೇ ಯುದ್ಧವನ್ನು ಸಾರಿ ಹಲವು ಸಾವು, ನೋವು, ಕೆಡುಕುಗಳಿಗೆ ಕಾರಣವಾಗುತ್ತಿರುವ ಅಣ್ಣನನ್ನು ಕಂಡು ರೋಸಿ ಹೋಗುತ್ತಾಳೆ. ಪ್ರತಿಭಟಿಸಲಾಗದೆ ಮನದಲ್ಲೇ ವೇದನೆಯನ್ನು ಅನುಭವಿಸುತ್ತಾಳೆ. ಆದರೆ ಮಾತನಾಡುವ ಸಂದರ್ಭ ಬಂದಾಗ ಒಮ್ಮೆಲೆ ಸ್ಫೋಟಗೊಂಡಂತೆ ಎಲ್ಲವನ್ನೂ ಕಕ್ಕುತ್ತಾಳೆ. ಯುದ್ಧಕ್ಕೆ ಹೊರಟ ಜಯದ್ರಥನನ್ನು ಆರತಿ ಎತ್ತಿ ಕಳುಹಿಸಿಕೊಡುವಂತೆ ಹೇಳಲು ದುರ್ಯೋಧನ ಬಂದಾಗ ಅವಳಾಡುವ ಮಾತುಗಳು ಹೊಸ ಚಿಂತನೆಯನ್ನು ಹುಟ್ಟು ಹಾಕುತ್ತವೆ. ಕಾದಂಬರಿಯಲ್ಲಿ ಇದೊಂದು ಹೊಸ ಬದಲಾವಣೆ. "ಯುದ್ಧಕ್ಕೆ ಹೊರಡುವ ಮುನ್ನ ನೀವೆಲ್ಲ ಪ್ರತಿದಿನ ಮುತ್ತೈದೆ ಮಂಗಳಾಂಗಿಯರ ರೂಪಿನಲ್ಲಿಯೇ ನಿಮ್ಮನಿಮ್ಮ ಹೆಂಡತಿಯರನ್ನು ನೋಡಲು ಇಷ್ಟಪಡುತ್ತೀರಿ ನಿಮ್ಮ ನಿಮ್ಮ ಪುರುಷಾರ್ಥಗಳಿಗೆ ಯುದ್ಧ ಕಾದಾಟಗಳನ್ನು ನಡೆಸಿ ಸ್ವರ್ಗದಲ್ಲಿರುವ ರಂಬೆ, ಮೇನಕೆ, ತಿಲೋತ್ತಮೆಯರಿಗಾಗಿ ಬಹಳವೇ ಅನಂದದಿಂದ ಸಾವು ಕೈಬೀಸಿ ಕರೆಯುವುದಕ್ಕೆ ಮುನ್ನವೇ ಅದರ ಕೈಕುಲುಕಿ ಹೊರಟು ಬಿಟ್ಟನಂತರ ಅದೇ ಮಂಗಳಾಂಗಿಯರ ಸ್ಥಿತಿ ಹೇಗಾಗಿರುತ್ತದೆ ಎಂಬ ರೂಪವನ್ನು ನೋಡಲು ಯಾರೂ ಇಷ್ಟಪಡುವುದಿಲ್ಲ. ನಿಮ್ಮ ಕ್ಷತ್ರಿಯ ಧರ್ಮ ಭೂಮಿಯ ಆರ್ದ್ರತೆಯನ್ನು ನುಂಗಿ ರಕ್ತದ ಹೆಪ್ಪನ್ನು ಅವಳ ಮೈ ಪೂರಾ ಅಂಟಿಸಿರುವಾಗ ಒಮ್ಮೆ ಒಂದೇ ಒಂದು ಬಾರಿ ನಿಮ್ಮೊಡನೆ ಸುಖ, ದುಃಖಗಳನ್ನು ಹಂಚಿಕೊಂಡು ಇದ್ದ ಹೆಂಡತಿಯರ ನೆನಪನ್ನು ಮಾಡಿಕೊಡುವುದಕ್ಕೆ ಅದು ಬಿಡುತ್ತದೆಯೇ? ನೆನ್ನೆ ಅವಳು, ಇಂದು ನಾನು, ನಾಳೆ ಇನ್ನೊಬ್ಬಳು. ಘಳಿಗೆಗಳ ವ್ಯತ್ಯಾಸವಷ್ಟೇ. ವೈಧವ್ಯವನ್ನು ಅಪ್ಪುವ ಚೆಂದಕ್ಕೆ ಮುತ್ತೈದೆತನದ ವೇಷ ಭೂಷಣಗಳ ಪ್ರದರ್ಶನ ಏಕೆ? ಹಾಗಾಗಿ ಹೀಗೇ, ಇಲ್ಲೇ ನಾನಿರುತ್ತೇನೆ. ಅವರಿಗೆ ನನ್ನನ್ನು ನೋಡಲೇ ಬೇಕೆನ್ನಿಸಿದರೆ ಇಲ್ಲಿಯೇ ಬಂದು ಹೀಗೆ ನೋಡಿಹೋಗಲಿ" ಎನ್ನುತ್ತಾಳೆ.

ಆದರೆ ದುರ್ಯೋಧನ ತಂಗಿಗೆ ಕೊಟ್ಟ ಭರವಸೆಯಂತೆ ಜಯದ್ರಥನನ್ನು ಉಳಿಸಿಕೊಳ್ಳು ಸಾಧ್ಯವಾಗದೇ ಪಾಂಡವರು ಅವನನ್ನು ಮೋಸದಿಂದ ಕೊಂದರು ಎಂದಾಗ ದುಶ್ಯಲೆ ಆಡುವ ಮಾತುಗಳು ಮತ್ತೂ ಅರ್ಥಪೂರ್ಣವಾಗಿ ಮೂಡಿಬಂದಿದೆ.

"ಕೃಷ್ಣನನ್ನು ಕಪಟಿ ಎನ್ನುತ್ತೀದ್ದೀಯೇ? ನೆನ್ನೆಯ ದಿನ ಅಭಿಮನ್ಯುವನ್ನು ಧರ್ಮ ಯುದ್ಧದಲ್ಲಿಯೇ ನೀವುಗಳು ಕೊಂದಿರೇನು? ವಾವೆಯಿಂದ ನಿನ್ನ ಮಗನಾಗಿದ್ದನಲ್ಲವೇ ಅವನು ವೈಧವ್ಯಕ್ಕೆ ಅಳುತ್ತಿದ್ದೀಯೇ ಉತ್ತರೆಯ ವೈಧವ್ಯ ನಿನ್ನಲ್ಲಿ ಯಾವ ಭಾವವನ್ನು ಮೂಡಿಸುತ್ತಿಲ್ಲವೇ? ಇಡೀ ಭರತಖಂಡವನ್ನು ವೈಧವ್ಯ ಖಂಡವಾಗಿಸುವ ತನಕ ನಿನ್ನ ಯುದ್ಧ ದಾಹ ಹಿಂಗುವುದಿಲ್ಲವೇ? ನನ್ನ ವೈಧವ್ಯದ ಬಗೆಗೆ ನನಗೆ ಚಿಂತೆಯಿಲ್ಲ ನೀನು ಕೊಟ್ಟ ಮಾತನ್ನು ಆಗ ನಾನು ತೆಗೆದುಕೊಳ್ಳಲಿಲ್ಲ. ಈಗ ನಾನೇ ಒಂದು ಮಾತು ಕೇಳುತ್ತಿದ್ದೇನೆ ಕೊಡುತ್ತೀಯಾ? ವಿಧವೆ ಏನೋ ಕೇಳುತ್ತಿದ್ದಾಳೆ ಎಂದು ಉದಾಸೀನ, ತಾತ್ಸಾರ ಮಾಡದಿರು' ಎಂದು, ಈಗಲಾದರೂ ಯುದ್ಧವನ್ನು ನಿಲ್ಲಿಸು, ಪಾಂಡವರಿಗೆ ಏನು ಕೊಡಬೇಕೋ ಕೊಟ್ಟುಬಿಡು, ಅತ್ತಿಗೆಯ ಕುಂಕುಮವನ್ನಾದರೂ ನೋಡುವಾಸೆ ಎಂದು ಹೇಳುತ್ತಾಳೆ ಆದರೆ ದುರ್ಯೋಧನ ತನ್ನ ಛಲವನ್ನೇ ಮುಂದುಮಾಡಿದಾಗ ದುಶ್ಯಲೆ ಸೋತು ಅಲ್ಲಿಂದ ತನ್ನ ರಾಜ್ಯಕ್ಕೆ ಹೊರಟುಬಿಡುತ್ತಾಳೆ. ಅಣ್ಣನಂತೆ ಛಲಹೊಂದಿದ ತಂಗಿಯ ಛಲ, ಕೋಪತಾಪಗಳನ್ನು ಮನೋಜ್ಞವಾಗಿ ಕಾದಂಬರಿಕಾರರು ಚಿತ್ರಿಸಿದ್ದಾರೆ.

# ಅಧ್ಯಾಯ – ೭

# ಸ್ತ್ರೀವಾದಿ ನೆಲೆಯಲ್ಲಿ 'ಮಾಧವಿ' ಹಾಗೂ 'ಜಯ' ಕಾದಂಬರಿಗಳಲ್ಲಿನ ಪ್ರಾಚೀನ ಕಥಾ ವಸ್ತುವಿನ ನಿರ್ವಹಣೆ

ಮಾಧವಿ ಮತ್ತು ಜಯ ಕಾದಂಬರಿಗಳ ಮೂಲ ಮಹಾಭಾರತ ವಾಗಿದೆ. ಈ ಮೊದಲೇ ಉಲ್ಲೇಖಿಸಿರುವಂತೆ 'ಮಾಧವಿ' ಮಹಾಭಾರತದಲ್ಲಿ ಬರುವ ಉಪಕಥೆಯಾದರೆ 'ಜಯ' ಮಹಾಭಾರತದ ಕುರುಕ್ಷೇತ್ರವಾಗಿದೆ. ಇವೆರಡೂ ವಸ್ತುಗಳ ನಡುವಿರುವ ಅಂತರ ೩೦೦ ವರ್ಷಗಳು ವಿಪರ್ಯಾಸವೆಂದರೆ ಇವೆರಡೂ ಕಾಲ ಘಟ್ಟಗಳಲ್ಲಿ ಸ್ತ್ರೀ ಅನುಭವಿಸಿದ ವೇದನೆ ಮಾತ್ರ ಒಂದೇ ಬಗೆಯದು ಪುರುಷನ ಸಾಧಕ–ಬಾಧಕಗಳ ವಸ್ತುವಾಗಿ ಕಾಮ ಪೂರೈಕೆಯ ಕಾಮಧೇನುವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ ಮಾತ್ರ ಕಾಣಿಸಿಕೊಳ್ಳುತ್ತಾಳೆ. ಅವಳ ಆಸೆ–ಆಕಾಂಕ್ಷೆ, ಬದುಕಿನ ಸ್ವರೂಪ, ಸ್ವಭಾವ, ಗುರಿಗಳೇನು? ಎಂಬುದಕ್ಕೆ ಉತ್ತರವೇ ಸಿಗುವುದಿಲ್ಲ. ಸ್ತ್ರೀ ಅನುಭವಿಸುತ್ತಿದ್ದ ಶೋಷಣೆ, ನೋವು, ಆಲೋಚನೆ, ಮೂಕ ವೇದನೆಗಳನ್ನು ಮಾಧವಿ ಮತ್ತು ಜಯ ಕಾದಂಬರಿಗಳು ಸ್ಪಷ್ಟವಾಗಿ ಧ್ವನಿಸುತ್ತವೆ. ವ್ಯಾಸ ಭಾರತದಲ್ಲಿ ದ್ರೌಪದಿ ಪಂಚ ಪಾಂಡವರ ಪತ್ನಿ, ಆದರೆ ಪಂಪನ ಭಾರತದಲ್ಲಿ ಕೇವಲ ಅರ್ಜುನನ ಪತ್ನಿ, ಅದೇ ರನ್ನನ ಗದಾಯುದ್ಧದಲ್ಲಿ ಭೀಮನ ಪಟ್ಟ ಮಹಿಷಿ. ಹೆಣ್ಣು ಪಾತಿವ್ರತ್ಯವನ್ನು ಕಾಯ್ದುಕೊಳ್ಳಬೇಕು ಎಂಬ ಪುರುಷಧೋರಣೆಯೇ ಇದಕ್ಕೆ ಮುಖ್ಯಕಾರಣ. ಆದರೆ ದ್ರೌಪದಿ ಪಂಚ ಪಾಂಡವರನ್ನು ಹೊಂದಲು ಇಷ್ಟಪಟ್ಟಳೇ? ಅದಕ್ಕವಳ ನಿಲುವೇನು? ಅವಳು ಪಟ್ಟ ಪಾಡೇನು? ಎಂಬುದನ್ನು ಪಿತೃ ಪ್ರಧಾನ ವ್ಯವಸ್ಥೆ ಪ್ರಶ್ನಿಸಿಕೊಳ್ಳುವ ಗೊಡವೆಗೆ ಹೋಗುವುದೇ ಇಲ್ಲ ಅಂದಿನ ಸಮಾಜ, ಸಮಾಜದ ರೀತಿ– ನೀತಿಗಳು, ಪುರುಷ ಪ್ರಜ್ಞೆಯಲ್ಲಿ ಸ್ತ್ರೀಯ ಸ್ಥಾನಮಾನ, ನೋವು, ಆಕ್ರಂದನ ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಲು ಯತ್ನಿಸಿದ ಫಲವೇ ಮಾಧವಿ ಹಾಗೂ ಜಯ ಕಾದಂಬರಿಗಳ ಜನನಕ್ಕೆ ಮುಖ್ಯ ಕಾರಣವಾಗಿದೆ. 'ಮಾಧವಿ' ಅಂದಿನ ಸಮಾಜವನ್ನು ವೈಜ್ಞಾನಿಕ ದೃಷ್ಟಿಕೋನದಲ್ಲಿ ನೋಡಿದರೆ, ಜಯ ಕುರುಕ್ಷೇತ್ರ ಯುದ್ಧಕ್ಕೆ ಮುಖ್ಯ ಕಾರಣವನ್ನು ಹುಡುಕುತ್ತದೆ. ಸ್ತ್ರೀಯರ ಅಂತರಂಗವನ್ನು ಎಳೆ ಎಳೆಯಾಗಿ ತೆರೆದಿಡುತ್ತದೆ. ಸ್ತ್ರೀಯರಲ್ಲಿ – ಪುರುಷ ಗುಣವು, ಪುರುಷರಲ್ಲಿ – ಸ್ತ್ರೀ ಗುಣವು ಇರುವುದನ್ನು ಹೇಳುತ್ತದೆ. ಯುದ್ಧದಿಂದ ಬಳಲುವ ಸಾಮಾನ್ಯ ಜನರ ಬದುಕನ್ನು ಎರಡೂ ಕಾದಂಬರಿಗಳು ಬಿಂಬಿಸುತ್ತವೆ.

ಸ್ತ್ರೀ ಶೋಷಣೆಗೆ ಪುರುಷ ಮಾತ್ರ ಕಾರಣನಲ್ಲ ಅವನ ರೀತಿ–ನೀತಿಗಳನ್ನು ಪೋಷಿಸುತ್ತಾ ಬಂದಿರುವ ಸ್ತ್ರೀ ಕೂಡ ಕಾರಣಳೇ ಇದು ಸ್ತ್ರೀವಾದಿ ಚಿಂತನೆಯ

ನಿಲುವು ಹೌದು. ಗಾಲವ ತನ್ನ ಗುರುದಕ್ಷಿಣೆಯ ಸಂಪಾದನೆಗಾಗಿ ಯಯಾತಿಯ ಬಳಿಗೆ ಬಂದಾಗ ಯಯಾತಿಗೆ ಧರ್ಮ ಮುಖ್ಯವಾಗಿ ಕಾಣುತ್ತದೆ. ಬೇಡಿ ಬಂದ ಬ್ರಾಹ್ಮಣನನ್ನು ಬರಿಗೈಲಿ ಕಳಿಸಲು ಒಪ್ಪುವುದಿಲ್ಲ ಬದಲಾಗಿ ತನ್ನ ಮಗಳನ್ನೇ ದಾನವಾಗಿ ಕೊಡಲು ಮುಂದಾಗುತ್ತಾನೆ. ಆಗ ಅವನು ಹೇಳುವ ಮಾತಾದರೂ ಎಂಥದ್ದು?

"ಮುನಿಶ್ರೇಷ್ಠರೇ, ಯಾಗ ಇಷ್ಟಿಗಳಿಂದಾಗಿ ನನ್ನ ಭಂಡಾರ ಖಾಲಿಯಾಗಿದೆ. ಆದರೆ ನಿಮ್ಮನ್ನು ಬರಿಗೈಲಿ ಕಳಿಸುವುದು ಧರ್ಮಹಿತವಲ್ಲ. ನನಗೆ ಸರ್ವಾಂಗ ಸುಂದರಿಯೂ ಸಕಲ ವಿದ್ಯಾಸಂಪನ್ನಳೂ ಆದ ಮಗಳೊಬ್ಬಳಿದ್ದಾಳೆ. ಅವಳ ಹೆಸರು ಮಾಧವಿ. ಅವಳನ್ನು ನಿಮ್ಮ ವಶಕ್ಕೆ ಕೊಡ್ತೇನೆ ದೇವ ಅಪ್ಸರ ಗಂಧರ್ವರಿಗೆ ಮಿಗಿಲಾದ ಸೌಂದರ್ಯವುಳ್ಳ ಮಾಧವಿಯನ್ನು ಯಾರಾದರೂ ಪುಣ್ಯಾತ್ಮರಾಜನಿಗೆ ಕೊಟ್ಟು, ನಿಮ್ಮ ಗುರುದಕ್ಷಿಣೆಗೆ ಬೇಕಾದ ಅಶ್ವಗಳನ್ನು ಕನ್ಯಾಶುಲ್ಕದ ರೂಪದಲ್ಲಿ ದೊರಕಿಸಿಕೊಳ್ಳಬೇಕಾಗಿ ಪ್ರಾರ್ಥನೆ" (ಪು. ಸಂ. ೩೬) ಧರ್ಮಿಷ್ಠನಾದ ಯಯಾತಿಗೆ ಧರ್ಮ ಮುಖ್ಯವಾಯಿತು. ಆದರೆ ತನ್ನ ಮಗಳನ್ನು ರಕ್ಷಿಸುವುದು ಕೂಡ ಧರ್ಮ ಎಂದೆನಿಸುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಸ್ತ್ರೀ-ಪುರುಷನ ಕಣ್ಣಿಗೆ ಅವಳು ಅಂದವಾಗಿ ಕಾಮೋತ್ತೇಜಕವಾಗಿ ಕಾಣಬೇಕು ಎಂಬ ಉದ್ದೇಶವೇ ಆಗಿತ್ತು. ಗಂಡ ತನ್ನ ಹೆಂಡತಿಯನ್ನು ಮಾರಬಹುದಾಗಿತ್ತು, ದಾನಕೊಡಬಹುದಾಗಿತ್ತು. ಹಸುವಿನಂತೆ ಸ್ತ್ರೀಯ ವಿಕ್ರಯ ನಡೆಯುತ್ತಿತ್ತು. ಇದು ಮಗಳಿಗೂ ಅನ್ವಯವಾಗುತ್ತಿದ್ದ ನೀತಿ. ಆದುದರಿಂದ ಯಯಾತಿ ತನ್ನ ಮಗಳನ್ನು ದಾನ ನೀಡಲು ಹಿಂದು-ಮುಂದು ನೋಡುವುದಿಲ್ಲ. ಆದರೆ ಯಯಾತಿ ಮಾಧವಿಯನ್ನು ಗಾಲವನಿಗೆ ದಾನ ನೀಡುವುದಕ್ಕಿಂತ ಮೊದಲು ಮಾಧವಿಯ ಮಲತಾಯಿಯಾದ ದೇವಯಾನಿಯನ್ನು ಕೇಳುತ್ತಾನೆ. 'ಮಾಧವಿ' ಸವತಿಯ ಮಗಳು ಎಂಬ ನಿರ್ಲಕ್ಷ, ಕಣ್ಣು ಕುಕ್ಕುವಂತಿದ್ದ ಮಾಧವಿಯ ಚೆಲುವು ದೇವಯಾನಿಯಲ್ಲಿ ಮತ್ಸರವನ್ನು ಹುಟ್ಟಿಸುತ್ತಿತ್ತು. ಹಾಗಾಗಿ ಸಂತೋಷವಾಗಿಯೇ ಒಪ್ಪಿಗೆಯನ್ನು ಕೊಡುತ್ತಾಳೆ.

"ಬೊಕ್ಕಸದಲ್ಲಿ ಹಣವಿಲ್ಲ ಎನ್ನುತ್ತೀರಿ. ಮಾಧವಿಯ ಸ್ವಯಂವರ ಏರ್ಪಡಿಸಿದರೆ ಧನಕನಕ ಬೇಡವೆ? ಅದಕ್ಕೆ ಬದಲು ಮಾಧವಿಯನ್ನು ಈ ಮುನಿಗೆ ದಾನಕೊಟ್ಟು ಬಿಟ್ಟರೆ ನಮ್ಮ ಧರ್ಮವೂ ಉಳಿಯಿತು. ಸ್ವಯಂವರಕ್ಕೆ ಹೊಂದಿಸಿಕೊಳ್ಳಬೇಕಾದ ಹಣದ ಯೋಚನೆಯೂ ತಪ್ಪಿತು" "ಇನ್ನೊಂದು ಮಾತು, ನಿರ್ಧಾರ ತೆಗೆದುಕೊಂಡವರು ನೀವೇ ಎಂಬುದು ನೆನಪಿರಲಿ ನಾಳೆ ಮಲತಾಯಿ ಮಾಧವಿಯನ್ನು ದಾನಕೊಟ್ಟಳು ಎಂಬ ಅಪವಾದ ನನ್ನ ತಲೆಗೆ ಬರಬಾರದು" ಎಂದು ಹೇಳಿ ಎಚ್ಚರಿಕೆಯನ್ನು ಕೊಡುತ್ತಾಳೆ (ಪುಟ ಸಂ. ೩೫).

ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಮಾತು ನಿಜವಾಗಿ ಮಾಧವಿಯ ಬಾಳಿನಲ್ಲಿ ಮೊದಲ ಶತ್ರುವಾಗುತ್ತಾಳೆ. ಮಾಧವಿಯನ್ನು ದಾನವಾಗಿ ಕೊಡುವುದನ್ನು ತಡೆಯುವ ಅವಕಾಶ ದೇವಯಾನಿಗೆ ಒದಗಿತು ಆದರೆ ತನ್ನ ಒಪ್ಪಿಗೆಯನ್ನು ಕೊಡುವ ಮೂಲಕ ಮಾಧವಿಯ ಶೋಷಣೆಗೆ ಮೊದಲಾಗುತ್ತಾಳೆ. ಮಾಧವಿಯ ಬಾಳಿನಲ್ಲಿ ಸ್ತ್ರೀಯಿಂದ ಆಗುವ ಅವಮಾನ, ನಿಂದನೆ, ಶೋಷಣೆ ಇಲ್ಲಿಗೆ ನಿಲ್ಲುವುದಿಲ್ಲ.

ಹರ್ಯಶ್ವನ ರಾಣಿ ಮಾಧವಿಯ ಸೌಂದರ್ಯವನ್ನು ನೋಡಿ ಅಸೂಯೆಪಡುತ್ತಾಳೆ.

"ಮಹಾರಾಜರಿಗೆ ನೀನು ಯಾವ ಮಾಟ ಮಾಡಿದ್ದೀ ನೀನು ಅರಮನೆಗೆ ಬಂದ ದಿನದಿಂದ ಮಹಾರಾಜರು ನನ್ನ ಅಂತಃಪುರಕ್ಕೆ ಒಂದು ರಾತ್ರಿಯೂ ಬಂದಿಲ್ಲ ಗೊತ್ತಾ?"

"ನೀನಿಲ್ಲಿ ಇರೋದು ಒಂದು ಸಂವತ್ಸರ ಮಾತ್ರ ಅದು ನೆನಪಿರಲಿ" ಎಂದು ಚುಚ್ಚು ಮಾತುಗಳನ್ನಾಡುತ್ತಾಳೆ (ಪುಟ ಸಂಖ್ಯೆ – ೬೦).

ಇನ್ನು ದಿವೋದಾಸನ ರಾಣಿ ಸತ್ಯವತಿಗೆ ಮಾಧವಿ ತನ್ನ ಸವತಿಯಾಗಿ ಗಂಡನ ಪ್ರೀತಿಯಲ್ಲಿ ಪಾಲುಕೇಳಲು ಬಂದಳಲ್ಲ ಎನಿಸುತ್ತದೆ. ಆದರೆ "ಮಾಧವಿ ಒಂದು ವರ್ಷ ಇರುವುದಾಗಿಯೂ ಅವಳಿಂದ ಒಂದು ಗಂಡುಮಗುವಾದ ಬಳಿಕ ಹಿಂತಿರುಗಿಸ್ಬೇಕು ಅಂತ ಕರಾರಾಗಿದೆ" ಎಂದು ದಿವೋದಾಸ ಹೇಳಿದಾಗ ಸುಮ್ಮನಾಗುತ್ತಾಳೆ.

ಮಾಧವಿಗೆ ಗಂಡು ಮಗುವಾದಾಗ ಆ ಮಗುವಿನ ಲಾಲನೆ ಪಾಲನೆಯ ಸಂಪೂರ್ಣ ಜವಾಬ್ದಾರಿಯನ್ನು ಸತ್ಯವತಿಯೇ ವಹಿಸುತ್ತಾಳೆ. ಮಗುವಿಗೆ ಹಾಲುಣಿಸಲು ಅವಕಾಶವನ್ನು ಕೊಡದೇ ನಿರ್ಧಯಿಯಾಗಿ ವರ್ತಿಸುತ್ತಾಳೆ.

ಉಶೀನರರಾಜನ ರಾಣಿ ಮಹಿಮಾ

"ಏನು ಮಹಾ ರೂಪವೋ ಏನೋ! ಮುಂದೆ ಬಂದಿರೋ ಹೊಟ್ಟೆ ನೋಡೋಕಾಗಲ್ಲ"

"ರೂಪ ಇದ್ರೆ ಬಂತಾ ಪುಣ್ಯ ಒಬ್ರಲ್ಲ ಇಬ್ರು ಮೂವರು ರಾಜರ ಜೊತೆ ಹ್ಯಾಗಾದ್ರೂ ಬಾಳುವೆ ಮಾಡೋದೋ ಏನೋ? ಥೂ ಹೇಸಿಗೆ"

"ಏನ್ಮಾಡ್ತೀಯ ನೋಡೋಣ? ನಿನ್ಹಾಗೆ ಬದುಕೋಕ್ಕಿಂತ ಸಾಯೋದು ಮೇಲು" (ಪುಟ ಸಂಖ್ಯೆ ೧೫೧) ಎಂದು ಹೇಳಿದರೆ

ಇನ್ನೊಬ್ಬ ರಾಣಿ ಮಾಧವಿ ಹೊಟ್ಟೆಯಲ್ಲಿರುವ ಮಗುವಿಗೆ ವಿಷಕೊಡಲು ಮುಂದಾಗುತ್ತಾಳೆ.

ಹೀಗೆ ಇಲ್ಲಿ ಬರುವ ಸ್ತ್ರೀಪಾತ್ರಗಳು ಮಾಧವಿಗೊದಗಿದ ದುಃಸ್ಥಿತಿಗೆ ಮರುಗುವುದಿಲ್ಲ. ಅವಳ ನೋವಿಗೆ ಸ್ಪಂದಿಸುವುದಿಲ್ಲ. ಬದಲಾಗಿ ಅವಳ ಮನಸ್ಸಿಗೆ ನೋವಾಗುವ ರೀತಿಯಲ್ಲಿ ಮಾತನಾಡುತ್ತಾರೆ. ಪಾಚಿಗೆ ಪಾಚಿಯೇ ವೈರಿ ಎಂಬ ಮಾತನ್ನು ಹೆಣ್ಣಿನ ವಿಷಯದಲ್ಲಿ ನಿಜಮಾಡುತ್ತಾರೆ.

ವೇದಪಾರಂಗತರಾದ ಋಷಿಗಳೂ ಮಾನವ ಸಹಜ ದೌರ್ಬಲ್ಯದಿಂದ ದೂರ ಆಗಿರಲಿಲ್ಲ. ಬೋಧನೆಗೂ ಆಚರಣೆಗೂ ಅಂತರವಿತ್ತು. ಧರ್ಮ ಆತ್ಮಗಳ ಬಗ್ಗೆ ಭಾರೀ ಜಿಜ್ಞಾಸೆ ನಡೆಸುವಂತಹ ಮುನಿಗಳು ಅಬಲೆಯೊಬ್ಬಳ ಸಂಕಟವನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಶುಕ್ಲ ಯಜುರ್ವೇದ ಪಂಡಿತನಿಗೆ ಗುರುದಕ್ಷಿಣೆ ಸಲ್ಲಿಸುವುದು ಮುಖ್ಯವಾಗಿತ್ತೇ ವಿನಃ ಅದಕ್ಕಾಗಿ ಅನುಸರಿಸುವ ವಿಧಾನ ಮುಖ್ಯವಾಗಿರಲಿಲ್ಲ. ತನ್ನ ಸ್ವಾರ್ಥ ಮುಚ್ಚಿಕೊಳ್ಳಲು ಪರಲೋಕ ಸದ್ಗತಿ ಎಂಬಂಥ ದೊಡ್ಡ ದೊಡ್ಡ ಮಾತುಗಳನ್ನು ಆತ ಆಡುತ್ತಾನೆ.

'ಮೈಯೆಲ್ಲಾ ಬೆಳ್ಳಗಿರುವ ಒಂದು ಕಿವಿ ಮಾತ್ರವೆ ಕಪ್ಪಾಗಿರುವ ೮೦೦ ವಿಶೇಷ ಲಕ್ಷಣಗಳುಳ್ಳ ಅಶ್ವಗಳು' ಒಬ್ಬನೇ ರಾಜನ ಬಳಿ ಸಿಗದೇ ಹೋದಾಗ ಮೂರು ಜನ ರಾಜರಲ್ಲಿ ಮತ್ತು ಒಬ್ಬ ಋಷಿಯ ಬಳಿ ಒಂದು ವರ್ಷದ ಅವಧಿಗೆ ದಾನವಾಗಿ ಕೊಡುತ್ತಾನೆ. ಆದ್ದರಿಂದ ಮಾಧವಿ ಯಾವ ಯಾವ ಕಷ್ಟಗಳಿಗೆ ಒಳಗಾಗಬೇಕಾಗುತ್ತದೆ ಎಂಬುದನ್ನು ಗಾಲವ ಚಿಂತಿಸುವುದಿಲ್ಲ. ಅವನ ಮುಖ್ಯ ಗುರಿಯ ಮುಂದೆ ಪರರ ಬದುಕು ಹೇಗೆ ನಡೆದರೂ ಸರಿ. ಅವಮಾನ, ನೋವು, ಸಂಕಟ ಯಾವುವು ಮುಖ್ಯವಾಗುವುದಿಲ್ಲ.

ಬಟ್ಟೆ ಬದಲಿಸುವ ಹಾಗೆ ಹೆಣ್ಣುಗಳನ್ನು ಅನುಭವಿಸುವ ರಾಜರುಗಳು ಸಹ ಮಾಧವಿಯ ಬಳಿ ಮಾನವತೆಯನ್ನು ಮರೆಯುತ್ತಾರೆ. ಮಾಧವಿಯಿಂದ ಲೈಂಗಿಕ ಆಸೆಯನ್ನು ಪೂರೈಸಿಕೊಂಡು ಒಂದೊಂದು ಗಂಡು ಮಗುವನ್ನು ಪಡೆದ ಬಳಿಕ ಮಾಧವಿಗೂ ಅವರಿಗೂ ಯಾವುದೇ ಸಂಬಂಧವಿಲ್ಲದ ರೀತಿಯಲ್ಲಿ ವರ್ತಿಸುತ್ತಾರೆ. ಮೂರು ರಾಜರಿಂದ ತಲಾ ೨೦೦ರಂತೆ ಆರುನೂರು ಕುದುರೆಗಳನ್ನು ಸಂಪಾದಿಸಿದ ಗಾಲವನಿಗೆ ಇನ್ನುಳಿದ ಇನ್ನೂರು ಕುದುರೆಗಳು ಎಲ್ಲಿಯೂ ಸಿಗದೇ ಹೋದಾಗ ವಿಶ್ವಾಮಿತ್ರನಿಗೆ ಇನ್ನೂರು ಕುದುರೆಗಳಿಗೆ ಬದಲಾಗಿ ಮಾಧವಿಯನ್ನೇ ಕೊಡುತ್ತಾನೆ.

ವಿಶ್ವಾಮಿತ್ರನ ಬಗ್ಗೆ ಪುರಾಣಗಳಲ್ಲಿ ಆದರ್ಶ ಕಲ್ಪನೆಗಳೇ ಹೆಚ್ಚು. ಆತ ಮಹಾಕ್ಷತ್ರಿಯ ರಾಜರ್ಷಿ. ಆದರೆ ಮಾಧವಿಯನ್ನು ಗಾಲವ ಅವನಲ್ಲಿಗೆ ಕರೆದು ತಂದಾಗ ಆತ ಆಡುವ ಮಾತುಗಳು ಹೀಗಿವೆ.

"ಎಂಟುನೂರು ಕುದುರೆಗಳಿಗೆ ಬದಲಾಗಿ ಈ ಮಾಧವಿಯನ್ನೇ ಸ್ವೀಕರಿಸಿ ಎಂದು ಹೇಳಿ ಇವಳನ್ನು ನನ್ನಲ್ಲಿ ತಂದು ಬಿಟ್ಟಿದ್ದಿರೆ ಎಷ್ಟು ಚೆನ್ನಾಗಿರುತ್ತಿತ್ತು. ನಾನೇ ಇವಳನ್ನು ಭೋಗಿಸಿ ಜಗತ್ತಿಗೆ ಶ್ರೇಷ್ಠರಾದ ನಾಲ್ಕುಮಂದಿ ಪುತ್ರರನ್ನು ಪಡೆಯುತ್ತಿದ್ದೆ" ಎನ್ನುತ್ತಾನೆ.

ವಿಶ್ವಾಮಿತ್ರ ಕೂಡ ಮಾಧವಿಯನ್ನು ಇಷ್ಟಪಡುತ್ತಾನೇ ವಿನಃ ಅವಳಿಗಾಗಿರುವ ಅನ್ಯಾಯಕ್ಕಾಗಿ ದುಃಖಿಸುವುದಿಲ್ಲ. ಹೀಗೆ ಇಡೀ ಪುರುಷವರ್ಗ ಧರ್ಮದ ಹೆಸರಿನಲ್ಲಿ ಮಹಿಳೆಯನ್ನು ಯಾವ ರೀತಿಯಲ್ಲಿ ಶೋಷಣೆ ಒಳಪಡಿಸುತ್ತಿತ್ತು ಎಂಬುದನ್ನು ಕಾದಂಬರಿಕಾರರು ಮನೋಜ್ಞವಾಗಿ ಕಟ್ಟಿಕೊಡುತ್ತಾರೆ.

ಒಟ್ಟಿನಲ್ಲಿ ಪಿತೃಪ್ರಧಾನವಾದ ಸಂಸಾರವೇ ಆಗಿನ ಕಾಲದಲ್ಲಿ ಸಮಾಜದ ಬೆನ್ನುಲುಬಾಗಿದ್ದು ಇವರ ದಬ್ಬಾಳಿಕೆ ಬಲಿಯಾಗುತ್ತಿದ್ದ ಸ್ತ್ರೀಯರ ಚಿತ್ರವನ್ನು ಮಾಧವಿಯ ಮೂಲಕ ಕಟ್ಟಿಕೊಡುತ್ತಾ ಅಂದಿನ ಸಮಾಜದ ವ್ಯವಸ್ಥೆಯನ್ನು, ರೀತಿರಿವಾಜುಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಲಾಗಿದೆ.

ಗಂಡುಮಗುವಿಲ್ಲದ ದಿವೋದಾಸ ಪುತ್ರಕಾಮೇಷ್ಟಿ ಯಾಗವನ್ನು ಮಾಡಿ ಯಾಗದಿಂದ ಸಿಗುವ ಪಾಯಸವನ್ನು ತನ್ನೆಲ್ಲ ರಾಣಿಯರು ಹಂಚಿ ಕುಡಿಯುವಂತೆ ಹೇಳುತ್ತಾನೆ. ಪಾಯಸದ ಬಟ್ಟಲು ಮಾಧವಿಯ ಬಳಿಗೆ ಬರುವಷ್ಟರಲ್ಲಿ ಖಾಲಿಯಾಗಿರುತ್ತದೆ. ಆದರೆ ದಿವೋದಾಸನ ಎಲ್ಲ ರಾಣಿಯರಿಗಿಂತ ಮೊದಲು ಗರ್ಭಧರಿಸಿ ಗಂಡುಮಗುವನ್ನು ಪಡೆಯುತ್ತಾಳೆ. ಮಾಧವಿಯ ಈ ಸನ್ನಿವೇಶದ ಮೂಲಕ ಪುತ್ರಕಾಮೇಷ್ಟ ಸಮಯದಲ್ಲಿ ಪಾಯಸದ ಪಾತ್ರೆ ಹಿಡಿದು ಯಾವ ದೇವತಾಪುರುಷನೂ ಅಗ್ನಿಯಲ್ಲಿ ಉದ್ಭವಿಸುವುದಿಲ್ಲ. ಅದು ಜನರ ಭ್ರಾಂತಿ ಇರಬಹುದು ಅಥವಾ ಮುನಿಗಳು ಸಾಮಾನ್ಯ ಜನರಲ್ಲಿ ತಮ್ಮ ಬಗ್ಗೆ ಗೌರವ ಹಾಗೂ ಭೀತಿಯ ಭಾವನೆಯನ್ನು ಹುಟ್ಟಿಸಲು ಸೃಷ್ಟಿಸಿದ ತಂತ್ರವಿದು ಎಂಬುದನ್ನು ಕಾದಂಬರಿ ಸ್ಪಷ್ಟಪಡಿಸುತ್ತದೆ.

ಯಾರದೋ ಗುರುಕಾಣಿಕೆಗಾಗಿ, ತಂದೆಯ ವಚನ ಪರಿಪಾಲನೆಗಾಗಿ ತನ್ನ ಬದುಕನ್ನು ಬಲಿಕೊಡಬೇಕಾದ ಪರಿಸ್ಥಿತಿ ಎದುರಾದಾಗ, ನಿರಂತರವಾಗಿ ಪುರುಷನಿಂದ ಶೋಷಣೆ ಒಳಗಾಗುವಾಗ ಮಾಧವಿ ಪ್ರತಿಭಟಿಸುತ್ತಾಳೆ. ಆದರೆ ಪುರುಷ ಸಮಾಜದೆದುರು ಅಸಹಾಯಕಳಾಗುತ್ತಾಳೆ. ಸಾಯಲೂ ಅಂಜಿಕೆಯಾಗಿ, ಬದುಕಲು ಹೇಸಿಕೆಯಾಗಿ ಉಸಿರಾಡುತ್ತಾಳೆ. ಗಾಲವ ತನ್ನ ಕಾರ್ಯಸಾಧನೆಯಾದ ಮೇಲೆ ಮಾಧವಿಯನ್ನು ಯಯಾತಿ ಬಳಿ ತಂದುಬಿಡುತ್ತಾನೆ. ಮಾಧವಿಗಾಗಿ ಮರುಗಿದ ಯಯಾತಿ ಪಾಪಪರಿಹಾರಕ್ಕಾಗಿ ಸ್ವಯಂವರವನ್ನು ಏರ್ಪಡಿಸುತ್ತಾನೆ. ಆದರೆ ಜೀವನದ ಬಗ್ಗೆ ಮನುಷ್ಯನ ದಬ್ಬಾಳಿಕೆಯ ಬಗ್ಗೆ ತಿರಸ್ಕಾರ ಮೂಡಿದ್ದ ಮಾಧವಿ ಅವರೆಲ್ಲರಿಂದ

ದೂರ ಹೊರಟುಹೋಗುತ್ತಾಳೆ. ಇದು ಮಾಧವಿಯ ಬಂಡಾಯ ಈ ಸಮರದಲ್ಲಿ ವೈಯಕ್ತಿಕ ಗೆಲುವು ಅವಳದಾಗುತ್ತದೆ.

ಎಂ.ಎಸ್.ವೇದಾ ಅವರ 'ಜಯ' ಮಹಾಭಾರತದ ಕಥೆಯಾದರೂ ವಿಶಿಷ್ಟ ಕಥಾಹಂದರವನ್ನು ಹೊಂದಿರುವ ಕಾದಂಬರಿ ೧೮ ದಿನಗಳ ಕಾಲ ನಡೆಯುವ ಕುರುಕ್ಷೇತ್ರದ ಯುದ್ಧವನ್ನು ೧೮ ಅಧ್ಯಾಯಗಳಲ್ಲಿ ನಿರೂಪಿಸುತ್ತಾ ಹಿನ್ನೋಟ ತಂತ್ರದ ಮೂಲಕ ಇಡೀ ಮಹಾಭಾರತವನ್ನು ಕಣ್ಮುಂದೆ ತರುತ್ತದೆ. 'ಜಯ'ದ ಪಾತ್ರವರ್ಗದಲ್ಲಿ ಸ್ಥೂಲವಾಗಿ ಎರಡು ಬಗೆ ಮಹಾಭಾರತದ ಮೂಲಕ ಈಗಾಗಲೇ ಓದುಗರಿಗೆ ಪರಿಚಯವಾಗಿರುವ ಪಾತ್ರಗಳು ಮತ್ತು ಕಾದಂಬರಿಕಾರರು ಕಲ್ಪಿಸಿರುವ ಹೊಸಪಾತ್ರಗಳು. ಸಮಾಜ ಪದ್ಧತಿಯ ವಿವಿಧ ಸ್ತರಗಳನ್ನು ಪ್ರತಿನಿಧಿಸುವಂತೆ ಇಲ್ಲಿ ಪಾತ್ರಗಳು ಬಹುಜಾಣ್ಮೆಯಿಂದ ಸೃಷ್ಟಿಸಲ್ಪಟ್ಟಿದೆ. ಮೇಲಿನ ಹಂತದಲ್ಲಿ ಪಾಂಡವರು ಮತ್ತು ಕೌರವರು, ತೀರ ಕೆಳಗಿನ ಹಂತದಲ್ಲಿ ಕಾಳ ಶಂಭು, ಅವನ ಮಡದಿ, ಸಾಮಂತ ಚಂದ್ರಸೇನ ಮತ್ತು ಅವನ ಮಡದಿ ರೋಹಿಣಿ. ರೋಹಿಣಿ ಸಾಮಂತರಾಜನ ಮಡದಿಯಾಗಿ ಶ್ರೇಣಿಕೃತ ಸಮಾಜ ಪರಿಸ್ಥಿತಿಯಲ್ಲಿ ಸ್ವಲ್ಪ ಎತ್ತರದ ಸ್ತರಕ್ಕೆ ಸೇರಿದವಳಾದರೂ ಅವಳ ಅಂತಸ್ತಿನಲ್ಲಿ ಆಗುವ ಏರುಪೇರುಗಳು ಅವಳನ್ನು ಕೆಳಸ್ತರಕ್ಕೆ ದೂಡಿಬಿಡುತ್ತವೆ. ಅವಳು ಅರಕ್ಷಿತಳು, ನಿರ್ಧನಳು, ಅಸಹಾಯಕಳು ಎಂದು ತಿಳಿದೊಡನೆ ಶಿಬಿರದ ವೈದ್ಯನಂತಹ ವ್ಯಕ್ತಿಯೂ ಅವಳನ್ನೂ ಶೋಷಿಸಲು ಹಿಂಜರಿಯುವುದಿಲ್ಲ ಪಾತ್ರ ಚಿತ್ರಣದಲ್ಲಿ ಬಹುಸೂಕ್ಷ್ಮವಾಗಿ ತಾತ್ತ್ವಿಕತೆಯೊಂದನ್ನು ಕಾದಂಬರಿಕಾರರು ಕಟ್ಟಿಕೊಡುತ್ತಾರೆ. ಮೂಲ ಮಹಾಭಾರತದ ಚೌಕಟ್ಟಿನಲ್ಲಿ ಈ ಮೊದಲೇ ಇದ್ದ ಪಾತ್ರಗಳು ಸಹ ಕಾದಂಬರಿಕಾರರ ಬರಹದಲ್ಲಿ ಹೊಸ ಚಿಂತನದ ನೆಲೆಯೊಂದನ್ನು ಬೆಳೆಸುತ್ತದೆ.

'ಜಯ' ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರಗಳು ಒಂದು ಭಿನ್ನ ತತ್ತ್ವದ ಒಳ ತಿಳಿವಿನಿಂದ ಸೃಷ್ಟಿಸಲ್ಪಟ್ಟಿದೆ. ಇಲ್ಲಿ ಒಬ್ಬರನ್ನೊಬ್ಬರು ಕಂಡರೆ ಮತ್ಸರ ತೋರುವುದಿಲ್ಲ. ಪುರುಷ ಕಾರಣದಲ್ಲಿ ಬಲಿಯಾಗುವ ತಮ್ಮ ಬದುಕಿಗಾಗಿ ಮರುಗುತ್ತವೆ, ಕುದಿಯುತ್ತವೆ, ಸಾಂತ್ವಾನ ಹೇಳಿಕೊಳ್ಳುತ್ತವೆ.

ದ್ರೌಪದಿ ಮತ್ತು ಸುಭದ್ರೆಯರ ಪಾತ್ರಗಳನ್ನು ಸವತಿ ಮಾತ್ಸರ್ಯದಂಥ ಕಲ್ಪನೆಯನ್ನು ಒಂದು ವಿಶಿಷ್ಟ ನೆಲೆಯಲ್ಲಿ ಕಾಣುತ್ತೇವೆ. ಸುಭದ್ರೆ, ಅರ್ಜುನನನ್ನು ವಿವಾಹವಾಗಿ ಬಂದಾಗ ದ್ರೌಪದಿ ಅವಳ ಮೇಲೆ ಸವತಿ ಮಾತ್ಸರ್ಯವನ್ನು ತೋರುವುದಿಲ್ಲ, ಅಭಿಮನ್ಯು ಮರಣ ಹೊಂದಿದಾಗ ದ್ರೌಪದಿ ಎಲ್ಲ ಸಾವು-ನೋವುಗಳಿಗೆ ನಾನೇ ಕಾರಣಳಾದೆ, ಇನ್ನು ಯಾರ್ಯಾರ ಸಾವುಗಳಿಗೆ ಕಾರಣಳಾಗುತ್ತೇನೋ ಎಂದು ದುಃಖಿಸುವಾಗ ಸುಭದ್ರೆ ಹೀಗೆ ನುಡಿಯುತ್ತಾಳೆ.

"ಭೂಮಿಯ ಅಳಿವು-ಉಳಿವಿನ ಪ್ರಶ್ನೆಯಲ್ಲಿ ಪುರುಷ ರಾಜಕಾರಣದ ಹಸ್ತಕ್ಷೇಪ ಇದೆಯೇ ವಿನಾ ನನ್ನ- ನಿನ್ನ ಬೇಕುಬೇಡಗಳ ಅಂಶ ಲವಲೇಶವೂ ಇಲ್ಲ. ನಾನು-ನೀನು ಬರೇ ಸಾಧನಗಳು ಅಷ್ಟೇ" ಇವರಿಬ್ಬರೂ ಸವತಿಯರಾದರೂ ಇವರ ನಡುವೆ ಅಪರೂಪದ ಸಖ್ಯವಿದೆ. ದ್ರೌಪದಿಯನೆರಳಿನಲ್ಲಿ ಅವಳ ಸ್ನೇಹದ ರಕ್ಷಣೆಯಲ್ಲಿಯೇ ಸುಭದ್ರೆ-ಅರ್ಜುನರ ದಾಂಪತ್ಯ ಬೆಳೆದು ಬಂದಿರುವುದು ಕಾದಂಬರಿಯ ವಿಶೇಷ.

ದಾಯಾದಿಗಳ ಜಗಳದಲ್ಲಿ ಬಲಿಯಾಗುವ ದ್ರೌಪದಿ, ಕುಂತಿ, ಗಾಂಧಾರಿ, ದುಶ್ಯಲೆ, ಅಭಿಲಾಷಾ, ರೋಹಿಣಿ ಪಾತ್ರಗಳು ತಮ್ಮ ತಮ್ಮ ಸ್ಥಿತಿಗಾಗಿ ಮರುಗುತ್ತವೆ. ತನ್ನೆದುರಿಗೆ ಇನ್ನೊಬ್ಬ ಹೆಣ್ಣಿಗೆ ಆಗುತ್ತಿರುವ ಅವಮಾನವನ್ನು ಸಹಿಸುವುದಿಲ್ಲ. ಅದನ್ನು ತಡೆಗಟ್ಟಲು ಪ್ರಯತ್ನಿಸಿ ಅಸಹಾಯಕರಾಗುತ್ತಾರೆ. ದ್ರೌಪದಿಯ ವಸ್ತ್ರಾಪಹರಣದ ಸಂದರ್ಭದಲ್ಲಿ ಗಾಂಧಾರಿ ಧೃತರಾಷ್ಟ್ರನಿಗೆ ಹೀಗೆನ್ನುತ್ತಾಳೆ.

"ನಿನಗೆ ಅಧಿಕಾರವಿದೆ ನಿಲ್ಲಿಸು ಮಹಾರಾಜ ನಡೆಯಲಿರುವ ಘೋರ ಘಟನೆಯನ್ನು ನಿನ್ನ ಮಾತುಗಳನ್ನು ನಿನ್ನ ಮಗ ಕೇಳಿಯೇ ಕೇಳುತ್ತಾನೆ. ಹೇಳು ಅವನಿಗೆ ಇದ ಸಲ್ಲದೆಂದು ನನ್ನಂತೆಯೇ ದ್ರೌಪದಿಯೂ ಒಂದು ಹೆಣ್ಣಲ್ಲವೇ? ಅಂತಹ ಹೆಣ್ಣನ್ನು ಅಪಮಾನಕ್ಕೆ ಒಳಪಡಿಸಿ ಯಾರಾದರೂ ದೊಡ್ಡವರಾಗಲು ಸಾಧ್ಯವೇ? ನಿಮ್ಮ ಸಾಧನೆಗಳನ್ನು ನೀವು ಗಂಡಸರೇ ಮಾಡಿಕೊಳ್ಳಿ ಅದಕ್ಕೆ ಬೇಕಾದಷ್ಟು ಕ್ಷೇತ್ರಗಳಿವೆ, ನೆಲೆಗಳಿವೆ, ನಿಮ್ಮ ದ್ವೇಷ, ಅಸೂಯೆ, ಪ್ರತಿಕಾರಗಳಿಗೆ ಸಂಬಂಧವೇ ಇಲ್ಲದ ಹೆಣ್ಣನ್ನು ಎಳೆತಂದು ಹೀಗೇಕೆ ಅಪಮಾನಗೊಳಿಸುತ್ತಿರುವಿರಿ ಅಪ್ಪಣೆ ಹೊರಡಿಸು ಮಹಾರಾಜ ಇದು ಸಲ್ಲದೆಂದು"

"ನನಗೆ ಕಿವಿ ಕೇಳಿಸುತ್ತಿದೆ. ಮಹಾರಾಜ ನಿನ್ನ ಮಕ್ಕಳನ್ನು ತಡೆ, ದ್ರೌಪದಿಯೂ ನಮ್ಮ ಸೊಸೆಯಲ್ಲವೇ ಧರ್ಮವಂತರಾದ ಪಾಂಡವರೂ ನಮ್ಮ ಮಕ್ಕಳೆಂಬ ಅಭಿಮಾನ ಬೇಡವೇ ನಮ್ಮ ಮಕ್ಕಳ ಉದ್ಧಾರಕ್ಕಾಗಿಯಾದರೂ ತಡೆ ಅವರನ್ನು ಮಂಗಕ್ಕೆ ಕಳ್ಳು ಕುಡಿಸುವಂತೆ ಅವರಿಗೆ ಕುಮ್ಮಕ್ಕು ಕೊಡುತ್ತಿರುವ ನಿನ್ನ ಮೌನವನ್ನು ಮುರಿ ಮಹಾರಾಜ" (ಪುಟ ಸಂಖ್ಯೆ. ೯೫) ಎಂದು ಆಕ್ರಂದಿಸುತ್ತಾಳೆ. ತನಗೊದಗಿದ ದುಃಸ್ಥಿತಿಗಿಂತ ಹೆಚ್ಚಾಗಿ ದ್ರೌಪದಿಯ ಸ್ಥಿತಿಗೆ ಮರುಗುತ್ತಾಳೆ. ಆದರೆ ಗಾಂಧಾರಿಯ ಮಾತಿಗೆ, ದುಃಖಕ್ಕೆ ಯಾವುದೇ ಮೌಲ್ಯವಿಲ್ಲದೇ ಹೋದಾಗ ಅಸಹಾಯಕಳಾಗುತ್ತಾಳೆ.

ದ್ರೌಪದಿ-ಭಾನುಮತಿಯರು ಓರಗಿತ್ತಿಯಾದರೂ ಪರಸ್ಪರ ಮಾತನಾಡಿದವರಲ್ಲ. ದ್ರೌಪದಿಯನ್ನು ರಾಜಸೂಯಯಾಗದಲ್ಲಿ ಕಂಡಿದ್ದ ಭಾನುಮತಿ ಮತ್ತೆ ಅವಳನ್ನು ಕಾಣುವುದು ವಸ್ತ್ರಾಪಹರಣದ ಸಂದರ್ಭದಲ್ಲಿ ತನ್ನ ಗಂಡನಿಂದಲೇ ದ್ರೌಪದಿಗಾಗುತ್ತಿದ್ದ ಅವಮಾನ, ಅವಾಚ್ಯ ನುಡಿಗಳನ್ನು ಕೇಳಿ ಸಹಿಸದಾಗುತ್ತಾಳೆ, ಕುದಿಯುತ್ತಾಳೆ. ಗಂಡನ ದುರಂತವನ್ನು ಅಂದೇ ಬರೆದಿಡುತ್ತಾಳೆ. ದ್ರೌಪದಿಗಾದ ಅವಮಾನ ತನಗಾದ

ಅಪಮಾನವೆಂದೇ ಭಾವಿಸುತ್ತಾಳೆ ಗಂಡನ ದುರಂತ ಸಮೀಪಿಸಿದಾಗ ಯಾವ ಭಗವತಿಯನ್ನು ಬೇಡಲು ಮುಂದಾಗುವುದಿಲ್ಲ.

"ಮನ-ಅಪಮಾನ, ಸೋಲು-ಗೆಲುವುಗಳನ್ನು ನಿರ್ಧರಿಸಬೇಕಿದ್ದರೆ ವಿಸ್ತಾರವಾದ ನಿಮ್ಮ ಪುರುಷ ಪ್ರಪಂಚದೊಳಗೆ ಅದನ್ನು ನೀವು ನಿರ್ಧರಿಸಿಕೊಳ್ಳಬೇಕಿತ್ತು. ನಾಲ್ಕು ಗೋಡೆಯೊಳಗಿರುವ ಒಂದು ಹೆಣ್ಣನ್ನು ಹೊರಕ್ಕೆ ಎಳೆತಂದು ನಿಮ್ಮಿಬ್ಬರ ಸೋಲು-ಗೆಲುವುಗಳಿಗೆ ಅವಳನ್ನು ನಿಕಷವನ್ನಾಗಿ ಇಟ್ಟುಕೊಳ್ಳಬಾರದಿತ್ತು. ಈವರೆಗೆ ಅವರಿವರು ನಿಮ್ಮನ್ನು ಕ್ರೂರಿಯೆಂದು ಕೆಡುಕನೆಂದು ಹೇಳಿದರೂ ನಾನದನ್ನು ಕಿವಿಗೆ ಹಾಕಿಕೊಂಡವಳಲ್ಲ. ಆದರೆ ಇಂದು.....!? ಒಂದು ಕ್ಷಣ.... ಒಂದೇ ಒಂದು ಕ್ಷಣ ದ್ರೌಪದಿಯ ಸ್ಥಾನದಲ್ಲಿ ನನ್ನನ್ನೋ ಅತ್ತೆಯವರನ್ನೋ, ತಂಗಿ ದುಶ್ಯಳೆಯನ್ನೋ ಇರಿಸಿ ನೋಡಿ.... !!" ಎಂದು ದುರ್ಯೋಧನನನ್ನು ಪ್ರಶ್ನಿಸುತ್ತಾಳೆ. (ಪುಟ. ೮೩) ಹೆಣ್ಣಿಗಾದ ಅವಮಾನದ ವಿರುದ್ಧ ತನ್ನನ್ನು ತೆರೆದುಕೊಳ್ಳುತ್ತಾಳೆ.

ಭಿಷ್ಮ, ಉತ್ತರ, ಅಭಿಮನ್ಯು ಪಾತ್ರಗಳು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಒಡಮೂಡಿವೆ. ಉತ್ತರನ ಪಾತ್ರ ವಿಶಿಷ್ಟವಾದುದು ವ್ಯಾಸಭಾರತದಲ್ಲಿ ಉತ್ತರನೂ ಹಾಸ್ಯ ಪಾತ್ರ ಸದಾ ಹೆಣ್ಣು ಮಕ್ಕಳೊಡನೆ ತನ್ನ ಪೌರುಷವನ್ನು ಕೊಚ್ಚಿಕೊಳ್ಳುತ್ತಾ ನಿಜವಾದ ಯುದ್ಧ ಎದುರಿಗೆ ಬಂದಾಗ ಓಡಿಹೋಗುವವನು. ಆದರೆ 'ಜಯ' ದಲ್ಲಿ ಕುರುಕ್ಷೇತ್ರ ಯುದ್ಧದ ಮೊದಲ ದಿನವೇ ಉತ್ತರ ಬಲಿಯಾಗುತ್ತಾನೆ. ಕಾದಂಬರಿಕಾರರು ಚಿತ್ರಿಸಿರುವ ಉತ್ತರ ವಿಭಿನ್ನ ಹೆಣ್ಣಿಗ, ಲಜ್ಜೆ, ಭಯ, ಶಾಲೀನತೆಗಳನ್ನು, ಕೋಮಲತೆಗಳನ್ನು ಸ್ವಭಾವ ಗುಣಗಳಾಗಿ ವಿಧಿಸುವ ಸಾಂಪ್ರದಾಯಕ ಸಮಾಜ ಗಂಡನ್ನು ಪೌರುಷದ ಮೂರ್ತಿಯನ್ನಾಗಿ ನೋಡಬಯಸುತ್ತದೆ. ಶೌರ್ಯ ನಿಷ್ಕರುಣೆ ಹೋರಾಟಗಳನ್ನು ಒಲ್ಲದಂತಹ ಉತ್ತರನಂತಹ ಸುಕುಮಾರ ಮನೋಧರ್ಮದ ಕಿರಿವಯಸ್ಸಿನ ಯುವಕ ಈ ಸಮಾಜದಲ್ಲಿ ಗೇಲಿಗೊಳಗಾಗುತ್ತಾನೆ. ಸಮಾಜದೊಂಬಿನ ಯುದ್ಧದಲ್ಲಿ ಕೊಲ್ಲಲ್ಪಡುತ್ತಾನೆ. ಯುದ್ಧದ ಮೊದಲ ದಿನವೇ ಉತ್ತರ ಕೊಲ್ಲಲ್ಪಡುವುದು ಈ ಮೌಲ್ಯಗಳ ಸಂಘದ ದೃಷ್ಟಿಯಿಂದ ಅದ್ಭುತ, ಸಾಂಕೇತಿಕವಾಗಿ ಮೂಡಿಬಂದಿದೆ. ಪುರುಷ ಛಲದ ಹೆಣ್ಣನ್ನು ಅವಮಾನಿಸುವ, ತೇಜೋವಧೆ ಮಾಡುವ ಸಮಾಜ ಹೆಂಗರುಳಿನ ಗಂಡನ್ನು ಸಹ ತೇಜೋವಧೆ ಮಾಡುತ್ತದೆ. ಉತ್ತರ, ಶೂರನ ಮುಂದೆ ಬಹುಮಾನದಂತೆ ಇಡಲ್ಪಡುವ ವೀರಸ್ವರ್ಗವನ್ನು ನಿರಾಕರಿಸುತ್ತಾನೆ. ಉತ್ತರನಿಗೊಂದು ಘನವಾದ ತಾತ್ತ್ವಿಕತೆ ಇದೆ. ಆದರೆ ಯುದ್ಧದ ಸಮೂಹ ಸನ್ನಿಯ ಎದುರು ಅದಕ್ಕೆ ಬೆಲೆಯೇ ಇಲ್ಲ ಅದು ಅವನಿಗೂ ಗೊತ್ತಿದೆ. "ಬೆತ್ತಲೆ ರಾಜ್ಯದಲ್ಲಿ ಬಟ್ಟೆಯುಟ್ಟವರೇ ಹುಚ್ಚರು" ಎಂಬ ವಿಷಾದದ ಮಾತು ಅದನ್ನು ಪುಷ್ಟೀಕರಿಸುತ್ತದೆ. ಪುರುಷನೊಳಗಿನ

ಕೋಮಲತೆ, ಮಾರ್ಧವಗಳನ್ನು ಯುದ್ಧ ಮತ್ತು ಪುರುಷ ರಾಜಕಾರಣ ಕೊಲ್ಲುತ್ತದೆ ಎನ್ನುವುದಕ್ಕೆ ಉತ್ತರನ ಭೌತಿಕ ಸಾವು ಒಂದು ರೂಪಕವಾಗಿದೆ.

ಅಭಿಮನ್ಯು ಉತ್ತರನೆಂಬ ಪುರುಷ ನಾಣ್ಯದ ಇನ್ನೊಂದು ಮುಖ ತನಗೆ ತಿಳಿಯದೆಂದರೆ, ತಾನು ಯುದ್ಧವನ್ನು ಒಲ್ಲೆನೆಂದರೆ ತನ್ನನ್ನು ಉತ್ತರನನ್ನು ಗೇಲಿ ಮಾಡುವಂತೆ ಗೇಲಿ ಮಾಡುವರೋ ಎಂಬ ಭಯದಲ್ಲಿ ತನ್ನ ಶೌರ್ಯವನ್ನು ಮೆರೆಯಬೇಕೆನ್ನುವ ಆಸೆಯಲ್ಲಿ ಮಹತ್ವಾಕಾಂಕ್ಷೆಗೆ ಬಲಿಯಾಗುತ್ತಾನೆ.

ಇಂತಹುದೇ ಇನ್ನೊಂದು ತಾತ್ತ್ವಿಕ ನೆಲೆಯನ್ನು ಅನಾವರಣಗೊಳಿಸುವ ಪಾತ್ರ ಭೀಷ್ಮನದು. ಭೀಷ್ಮ ಪ್ರಪಂಚದ ಕಣ್ಣಿಗೆ ಬ್ರಹ್ಮಚಾರಿ, ಮಹಾಶೂರ, ನಿಷ್ಠುರ ಯೋಧ, ಕಣ್ಣಿವೆ ಮುಚ್ಚಿ ತೆಗೆಯುವದರೊಳಗೆ ಪಾಂಡವ ಸೇನೆಯನ್ನು ಸವರಿ ಸವರಿ ಹಾಕುವವನು. ಭೀಮನ ಪಾತ್ರದಲ್ಲಿ ಹೂವಿನ ಸುಗಂಧದಂತೆ ಕಂಡೂ ಕಾಣದ ಅಂಶವೊಂದಿದೆ. ಅದು ಆ ಮಹಾಪ್ರತಾಪಿಯೋಧನ ಮನಸ್ಸಿನಲ್ಲಿ ಒಬ್ಬಳು ತಾಯಿ ಇದ್ದಾಳೆ ಎನ್ನುವುದು ತನ್ನೊಳಗಿನ ಶಿಶುವನ್ನು, ವೈಯಕ್ತಿಕವಾಗಿ ಸಂಬಂಧಗಳ ಆರ್ದ್ರತೆಯನ್ನು ಜೀವಂತವಾಗಿಟ್ಟುಕೊಂಡಿರುವ ಅರ್ಜುನನ ನುಡಿಗಳಲ್ಲಿ ಭೀಷ್ಮನ ತಾಯಿ ವ್ಯಕ್ತಿತ್ವ ಅನಾವರಣಗೊಳ್ಳುತ್ತದೆ. ಮಣ್ಣಾಟವಾಡುತ್ತ ಅದೇ ಕೈಗಳಲ್ಲಿ ತನ್ನ ತೊಡೆಯನ್ನೇರಿ ತನ್ನ ಗಡ್ಡ ಹಿಡಿದೆಳೆಯುವ ತನ್ನ ಬೆಳ್ಳನೆಯ ರೇಷ್ಮೆ ವಸ್ತ್ರವನ್ನು ಮಣ್ಣುಮಾಡುವ ಶಿಶು ಅರ್ಜುನನ್ನು ಸಹಿಸಿದಂತೆಯೇ ಅವನ ಬಾಣವರ್ಷವನ್ನು ಸಹಿಸಿ ಶರಶಯ್ಯೆ ಹಿಡಿಯುವ, ಸಹಿಸುವ, ಪಾಲಿಸುವ, ಪ್ರೀತಿಸುವ ಮೌಲ್ಯಗಳ ಭೀಷ್ಮ- ಪ್ರತಿ ಸ್ತ್ರೀಯರಲೊಬ್ಬ ಪುರುಷ ಪ್ರತಿ ಪುರುಷನೊಳಗೊಬ್ಬ ಸ್ತ್ರೀ ಜೀವಂತವಾಗಿರುತ್ತಾರೆನ್ನುವ ಹೊಸ ತತ್ತ್ವವೊಂದಕ್ಕೆ ಪ್ರತೀಕವಾಗಿದ್ದಾನೆ.

ಭಾನುಮತಿ, ದುರ್ಯೋಧನನ ನಡವಳಿಕೆಯ ಕುರಿತು ಭೀಷ್ಮನ ಬಳಿ ದೂರುತ್ತಾ ತಮ್ಮ ಮೊಮ್ಮಗನನ್ನು ನಿಯಂತ್ರಿಸಬೇಕೆಂದು ಕೇಳಿಕೊಳ್ಳುತ್ತಾ "ಭೀಷ್ಮ ಪಿತಾಮಹನ ಭುಜಬಲಕ್ಕೆ ಮೊಮ್ಮಗನನ್ನು ಎದುರಿಸಲಾರದಷ್ಟು ಮುಪ್ಪು ಆವರಿಸಿದೆಯೇ ಭೀಷ್ಮ ಪಿತಾಮಹನ ಮನೋಬಲ ಮೊಮ್ಮಗನೆದುರು ಹೀಗೆ ಇಷ್ಟು ದುರ್ಬಲ ಗೊಂಡಿದೆಯೇ?" ಎಂದು ಕೆಣಕಿದಾಗ ಭೀಷ್ಮ ಸ್ಥಾಪಿತ ಪುರುಷ ಮೌಲ್ಯಗಳುಳ್ಳ 'ಆದರ್ಶಯೋಧ'ನಂತೆ ತನ್ನ ಪೌರುಷದ ಬೆಂಕಿಯನ್ನು ಪ್ರಜ್ವಲಿಸುವ ಯಾವ ಪುರುಷ ವೀರಾವೇಷದ ಪ್ರತಿಜ್ಞೆಯನ್ನೂ ಮಾಡುವುದಿಲ್ಲ. ಬದಲಾಗಿ ಭಾನುಮತಿಗೆ ತಾಳ್ಮೆಯ ಸಹಬಾಳ್ವೆಯ ವಿವೇಕವನ್ನು ಹೇಳುತ್ತಾನೆ. ತಾನು ದುರ್ಯೋಧನನ ಜೊತೆಗಿರು-ವುದರಿಂದ ಅವನು ಮಾಡುವ ಕೆಡಕುಗಳು ಕಡಿಮೆಯಾಗುವುದೆಂಬ ಭೀಷ್ಮನ ವಿವೇಕ ಅಪ್ಪಟ ಹೆಣ್ಣಿನ ಮನಸ್ಸಿನ ವಿವೇಕವಾಗಿದೆ. ಭಾನುಮತಿಗೆ ದುರ್ಯೋಧನ-ನೊಡನಿರುವಂತೆ, ಅವನನ್ನು ಒಲ್ಲೈಸಿಕೊಂಡಿದ್ದೇವೆಂಬ ಭ್ರಮೆ ಮೂಡಿಸುತ್ತಾ

ಅವನೊಂದಿಗೆ ಇದ್ದು ಕೆಡಕನ್ನು ಕಡಿಮೆ ಮಾಡುವ ಹಾದಿನ್ನಷ್ಟೇ ನೋಡಬೇಕು ಎಂದು ಭೀಷ್ಮನು ಹೇಳುವ ಬುದ್ಧಿವಾದ ಸ್ತ್ರೀವಿವೇಕವೇ ಆಗಿದೆ.

ಹೀಗೆ 'ಜಯ' ಕಾದಂಬರಿಯಲ್ಲಿ ಬರುವ ಪುರುಷ ಪಾತ್ರಗಳು ಒಂದು ವಿಭಿನ್ನ ಬೆಳಕಿನಲ್ಲಿ ಮೂಡಿಬಂದಿವೆ. ಬಹುನಾಜೂಕಾಗಿ ಪುರುಷ ರಾಜಕಾರಣದಿಂದ ಸಮಾಜದ ಬೆಳವಣಿಗೆಗೆ ಸ್ವಾಸ್ಥ್ಯಕ್ಕೆ ಆಗುತ್ತಿರುವ ಹಾನಿಯನ್ನು ಅನಾವರಣ ಮಾಡುತ್ತದೆ. ಸೌಜನ್ಯಶೀಲನಾಗಿ ಅಂತಃಪುರದ ದಾಸಿಯನ್ನೂ ಅಮ್ಮಾ ಸೋದರಿ ಎಂದು ಕರೆಯುವ ಕರ್ಣ ದ್ರೌಪದಿಯ ಬಗ್ಗೆ ಸಭೆಯಲ್ಲಿ ತುಟಿ ಮೀರಿ ಮಾತನಾಡುವುದು. ಒಳ್ಳೆಯ ವ್ಯಕ್ತಿಯನ್ನೂ ಪುರುಷಶಕ್ತಿ- ರಾಜಕಾರಣ ಭ್ರಷ್ಟವಾಗಿಸುವ ರಿತಿಯೇ ಆಗಿದೆ. ಹೀಗೆ ಸಮಾಜದ ಶಕ್ತಿ, ರಾಜಕಾರಣ, ಪುರುಷನ ಅಂತರಂಗದ ಕೋಮಲ ಪ್ರಪಂಚವನ್ನು ಮುಚ್ಚಿ ಹಾಕುವ ಹೊಸಕಿ ಹಾಕುವ ಯುವಕರ ಭವಿಷ್ಯವನ್ನು ಕೊಲ್ಲುವ ರೀತಿಯನ್ನು ಅನಾವರಣ ಮಾಡಿದೆ.

ಮಹಾಭಾರದಲ್ಲಿಲ್ಲದ ಹೊಸ ಪಾತ್ರಗಳು ಅಭಿಲಾಷಾ, ರೋಹಿಣಿ ಕಾಳಶಂಭು ಮತ್ತು ವೈದ್ಯ, ಅಭಿಭೂ ಮತ್ತು ಚಂದ್ರಸೇನರ ಹೆಸರು ಮತ್ತು ಉಲ್ಲೇಖ ಮಹಾಭಾರತದಲ್ಲಿದ್ದರೂ ಹೆಸರಿನಿಂದಾಚೆಗೆ ಉಳಿದುದೆಲ್ಲಾ ವೇದಾರ ಸ್ವಂತ ಸೃಷ್ಟಿಯೇ ಆಗಿದೆ.

ಅಭಿಲಾಷಾ ಮತ್ತು ರೋಹಿಣಿ ಈ ಎರಡೂ ಪಾತ್ರಗಳು ಸುರಕ್ಷಿತ ಪರಿಸರದಲ್ಲಿ ಬೆಳೆದು ಬಂದ ಅಂತಃಪುರದ ಸ್ತ್ರೀಯರ ಎರಡು ಮಾದರಿಗಳು ಈ ಎರಡೂ ಪಾತ್ರಗಳು ಯೌವ್ವನ ಚೆಲುವು ಮುಗ್ಧತೆಗಳನ್ನು ಹೊಂದಿವೆ.

ಈ ಹುಡುಗಿಯರು ಕುರುಕ್ಷೇತ್ರದ ಲೋಕದಲ್ಲೂ ನಗೆಯ ಹೂಗಳನ್ನು ಅರಳಿಸುವವರು ಇವರ ನಗೆ ಕುರುಕ್ಷೇತ್ರದ ಯುದ್ಧದಿಂದಾಗಿ ಮುರುಟಿ ಹೋಗುತ್ತದೆ. ಹಾಗೇ ಉತ್ತರನ ಸುಕುಮಾರ್ಯ, ಅಭಿಮನ್ಯುವಿನ ಶೌರ್ಯ, ಉತ್ತರೆಯ ಸಂಸಾರ ಸೌಖ್ಯ, ಸುಭದ್ರೆಯ ದ್ರೌಪದಿಯ ತಾಯ್ತನ ಕಾಳಶಂಭುವಿನಂತಹ ಜನಸಾಮಾನ್ಯರ ಕೌಟುಂಬಿಕ ನೆಮ್ಮದಿ ಎಲ್ಲವೂ ಯುದ್ಧದಿಂದಾಗಿ ನಾಶವಾಗುತ್ತದೆ. ಎಲ್ಲರ ನಾಶಕ್ಕೆ ಕಾರಣವಾಗುವ ಯುದ್ಧವನ್ನು ವಿರೋಧಿಸಿ ಎಲ್ಲವನ್ನು ಹಂಚಿಕೊಂಡು ಬದುಕೋಣ ಎಂದು ಹೇಳುವ ಉತ್ತರ ಕುಮಾರ ವೀರಸ್ವರ್ಗವನ್ನು ನಿರಾಕರಿಸುತ್ತಾನೆ. ನಾವು ಯಾರೆದುರಿಗೂ ಕೈಚಾಚುವುದು ಬೇಡ, ಭೂಮಿತಾಯಿಯ ಮಕ್ಕಳಾಗಿ ಬದುಕೋಣ ಎಂದು ರೋಹಿಣಿ ಪ್ರಭುತ್ವ ನೀಡುವ ಪರಿಹಾರವನ್ನು ನಿರಾಕರಿಸುತ್ತಾಳೆ. ಕುಂತಿ ಸೊಸೆಯ ನಿರ್ಧಾರದಲ್ಲಿ ಹಸ್ತಕ್ಷೇಪ ಮಾಡಲು ನಿರಾಕರಿಸುತ್ತಾಳೆ. ಅಲ್ಲದೆ ಆ ನಿರ್ಧಾರವನ್ನು ಒಪ್ಪಿಕೊಳ್ಳುತ್ತಾನೆ. ದುಶ್ಯಳೆ ಜಯದ್ರಥ ಬದುಕಿರುವಾಗಲೇ ಸೌಮಂಗಲ್ಯ ಚಿನ್ಹೆಗಳನ್ನು ನಿರಾಕರಿಸುತ್ತಾಳೆ. ರೋಹಿಣಿ ಮತ್ತು ಕಾಳಶಂಭು ಚಂದ್ರಸೇನ

ಮಹಾರಾಜನೊಡನೆ ಪಲಾಯನ ಮಾಡುವ ಸಂದರ್ಭದಲ್ಲಿ ದರ್ಮರಾಯನ ಅಧಿಕಾರ ಅರ್ಥಹೀನವಾಗಿ ಹೊಸದೊಂದು ನಿಜವಾದ ಅಧಿಕಾರ ಹುಟ್ಟಿಕೊಳ್ಳುತ್ತದೆ. ಅದು ಹುಟ್ಟುವುದು ವೈಯಕ್ತಿಕ ಸಂಬಂಧಗಳ ತುಡಿತಗಳನ್ನು ಗೌರವಿಸಿ ಅಪಾಯ ಮತ್ತು ಪ್ರಭುತ್ವ ವಿರೋಧಗಳನ್ನು ಎದುರಿಸಲು ಸಿದ್ಧವಾದುದರ ಸ್ಫೂರ್ತಿಯಲ್ಲಿ ಮತ್ತು 'ಇವರಿಬ್ಬರನ್ನು ಬಿಡುಗಡೆ ಮಾಡಿ ಸುರಕ್ಷಿತವಾಗಿ ಗಡಿದಾಟಿಸಿ ಬನ್ನಿ ಎಂಬ ದ್ರೌಪದಿಯ ಅಪ್ಪಣೆಯಲ್ಲಿ ಹೀಗೆ ವಿಭಿನ್ನ ನಿಲುವು ಆಲೋಚನೆಗಳ ಹಿನ್ನಲೆಯಲ್ಲಿ ಪ್ರಾಚೀನ ಕಥಾವಸ್ತು ಈ ಎರಡೂ ಕಾದಂಬರಿಗಳಲ್ಲಿ ಅರ್ಥಪೂರ್ಣವಾಗಿ ಮೂಡಿ ಬಂದಿದೆ. ಮತ್ತು ಹೊಸ ಮೌಲ್ಯಗಳನ್ನು ಸದ್ದಿಲ್ಲದೆ ಅನಾವರಣಗೊಳಿಸುತ್ತವೆ.

# ಅಧ್ಯಾಯ ೮

## ಉಪಸಂಹಾರ

ನಮ್ಮ ಪುರಾಣ, ಪುಣ್ಯಕತೆಗಳಲ್ಲಿ, ಮಹಾಕಾವ್ಯಗಳಲ್ಲಿ, ಶಾಸನಗಳಲ್ಲಿ ರಾಜ ಮಹಾರಾಜರುಗಳ ಕತೆಗಳೇ ತುಂಬಿವೆ. ಜನಸಮುದಾಯಗಳು ಇಲ್ಲಿ ಕೇವಲ ವಸ್ತುಗಳಾಗಿ ಮಾತ್ರವೇ ಬಂದಿದ್ದಾರೆ. ಅದರಲ್ಲೂ ಮಹಿಳೆಯರು ಭೋಗವಸ್ತುವಾಗಿ ಮಾತ್ರವೇ ಬಂದಿದ್ದಾರೆ. ಸಾಮಾಗ್ರಿಗಳಾಗಿ ಸೇವಕ ವರ್ಗದವರಾಗಿ ಮಾತ್ರವೇ ಪ್ರಸ್ತಾಪಗೊಂಡಿದ್ದಾರೆ. ಕುಟುಂಬ ವ್ಯವಸ್ಥೆಯಲ್ಲಿ ತಾಯಿ, ಹೆಂಡತಿ, ಮಗಳು ಎಂಬ ಸ್ಥಿರ ಮಾದರಿ ಪಾತ್ರಗಳಾಗಿ, ಪುರುಷ ಬದುಕಿನ ಪರಿಕರಗಳಾಗಿ ಕಾಣಿಸಿಕೊಂಡಿದ್ದಾರೆ. ಪಿತೃ ಸಂಸ್ಕೃತಿಯ ನಿರಂತತೆಯ ಕಾವಲುಗಾರರಾಗಿ ಪಾತಿವ್ರತ್ಯ, ಮಾತೃತ್ವಗಳನ್ನು ಆವಾಹಿಸಿಕೊಂಡು ಪರಿಪಾಲಿಸುವ ವಾಹಕಗಳಾಗಿ ದುಡಿದಿದ್ದಾರೆ. ಪುರುಷ ಕಲ್ಪಿತ ಚರಿತ್ರೆಯಲ್ಲಿ ಮಹಿಳೆಗೆ ಯಾವ ಅಸ್ತಿತ್ವವೂ ಇಲ್ಲ.

ಗಂಡು-ಹೆಣ್ಣಿನ ಲೈಂಗಿಕ ಸಂಬಂಧದಲ್ಲಿ ಗಂಡಸಿನ ಪಾತ್ರವನ್ನು ಮೇಲುವರ್ಗದ್ದೆಂದೂ ಶಕ್ತಿಯುತವಾದದ್ದೆಂದೂ ಪಿತೃಸಂಸ್ಕೃತಿಯ ಮುಖವಾಣಿಯಾದ ಸಾಹಿತ್ಯ ನಂಬುತ್ತದೆ. ಅಂಥ ಸಾಹಿತ್ಯವು ಗಂಡಸಿನ ಭೋಗದ ವಸ್ತುವಾಗಿ ಮಾತ್ರ ಹೆಣ್ಣಿನ ಜೀವನವನ್ನು ಮಿತಿಗೊಳಿಸುತ್ತಾ ಸ್ತ್ರೀವಾದಿಯನ್ನು ಅವಮಾನಿಸಿದೆ. ಅವಳ ವೈಯಕ್ತಿಕವಾದ ಸಮಗ್ರವಾದ ಜೀವನ ಅದಕ್ಕೆ ಮುಖ್ಯವಾಗುವುದಿಲ್ಲ. ಅವಳ ಇಡಿಯಾದ ವ್ಯಕ್ತಿತ್ವವನ್ನು 'ಲೈಂಗಿಕತೆ ಮತ್ತು ಸಂತಾನೋತ್ಪತ್ತಿಗೆ ಇಳಿಸಲಾಗಿದೆ. ಪ್ರಾಚೀನ ಕನ್ನಡ ಸಾಹಿತ್ಯ ಬಹುಪಾಲು ಇಂಥ ಧೋರಣೆಯನ್ನೇ ಬಿಂಬಿಸುತ್ತದೆ. ನಮ್ಮ ಹಲವು ಧಾರ್ಮಿಕ ಕಾವ್ಯಗಳು ಹೆಂಗಸನ್ನು ಆದಷ್ಟು ದೂರವಿರಿಸುವ ಆದರ್ಶವನ್ನು ಹೇಳುತ್ತಾ ಅವಳ ದೇಹದ ಸುತ್ತ ಗಿರಕಿ ಹೊಡೆದಿವೆ. ಶೃಂಗಾರ ಪ್ರಧಾನವಾದ ಕಾವ್ಯ ಪರಂಪರೆಯಲ್ಲಿ ಹೆಂಗಸು ಏನಾಗಿದ್ದಾಳೆ ಎಂಬುದನ್ನು ಸ್ತ್ರೀವಾದಿ ಎಚ್ಚರದಿಂದ ನೋಡಿದಾಗಲೇ ಆ ಸಾಹಿತ್ಯ ಪರಂಪರೆಯನ್ನು ದೃಷ್ಟಿಕೋನದ ಮಿತಿಗಳು ತಿಳಿಯುತ್ತವೆ.

ಮಹಿಳಾವಾದಿ ಓದಿನಿಂದ ಈವರೆಗಿನ ಓದು ಮತ್ತು ತಪ್ಪು ಓದಿನಲ್ಲಿ ಮೂಲಭೂತ ಬದಲಾವಣೆಯನ್ನು ತರಬೇಕೆಂಬುದೇ ಪ್ರಧಾನ ಗುರಿ. ತನ್ನ ತಾತ್ವಿಕ ನಿಲುವಿನ ಅಗತ್ಯದಿಂದಾಗಿ ಮಹಿಳಾ ಸಾಹಿತ್ಯವನ್ನು ತನ್ನ ಪ್ರಮುಖ ಆದ್ಯತೆಯಾಗಿಸಿಕೊಂಡಿದೆ. ಹೀಗಾಗಿ ಮಹಿಳಾ ಸಾಹಿತ್ಯದ ಸ್ವರೂಪ, ಮಹಿಳಾ ಸಾಹಿತ್ಯದ ಪರಂಪರೆ ಮಹಿಳೆಯರಿಂದ ರಚಿತವಾದ ಸಾಹಿತ್ಯ ಮಹಿಳಾ ಸಾಹಿತ್ಯ ಮಹಿಳೆಯರನ್ನು ಕೇಂದ್ರವಾಗುಳ್ಳ ಸಾಹಿತ್ಯ ಹಾಗು ಮಹಿಳಾವಾದಿಯಾದ ಸಾಹಿತ್ಯ ಸ್ತ್ರೀವಾದಿ ವಿಮರ್ಶೆ ಆಸಕ್ತಿ ಕ್ಷೇತ್ರಗಳಾದವು. ಈ ಮೇಲಿನ ಎಲ್ಲಾ ಅಂಶಗಳ

ಹಿನ್ನೆಲೆಯಲ್ಲಿ ಮಾಧವಿ ಹಾಗೂ ಜಯ ಕಾದಂಬರಿಗಳ ತಿರುಳನ್ನು ತಿಳಿಯ-ಬಹುದಾಗಿದೆ.

ಮಾಧವಿ ರಾಜಕುಮಾರಿಯಾಗಿ ಹುಟ್ಟಿದರೂ ಸಾಮಾನ್ಯ ಸ್ತ್ರೀಯಂತೆಯೇ ಕಷ್ಟಗಳನ್ನು ಅನುಭವಿಸುತ್ತಾಳೆ. ಪುರುಷನ ಕಾಮಪೂರೈಕೆಗೆ ಸ್ತ್ರೀ ಒಂದು ವಸ್ತುವಾಗಿದ್ದಳು. ಹಸುವಿನಂತೆ ಸ್ತ್ರೀಯ ವಿಕ್ರಯವೂ ನಡೆಯುತ್ತಿತ್ತು. ಹಾಗಾಗಿ ಜನ್ಮ ನೀಡಿದ ತಂದೆಯಾಗಿ ಮನುಷ್ಯತ್ವವನ್ನೇ ಮರೆಯುವ ಯಯಾತಿ ಮಗಳನ್ನು ಗಾಲವನಿಗೆ ದಾನವಾಗಿ ನೀಡುತ್ತಾನೆ. ಮಾಧವಿ ಕೂಡ ಅನೇಕ ಹಂತಗಳಲ್ಲಿ ತನಗಾಗುತ್ತಿರುವ ಅನ್ಯಾಯಗಳ ವಿರುದ್ಧ ದನಿಯೆತ್ತುತ್ತಾಳೆ. ಆದರೆ ಪುರುಷಪ್ರಧಾನ ಸಮಾಜದಲ್ಲಿ ಮಹಿಳೆ ದಂಗೆಯೇಳುವ ಹಾಗೆಯೇ ಇರಲಿಲ್ಲ. ಏನು ಎತ್ತ ಎಂದು ಕೇಳುವ ಹಕ್ಕು ಇರಲಿಲ್ಲ. ಒಂದು ವೇಳೆ ಅಂಥ ಪ್ರವೃತ್ತಿಯನ್ನು ತೋರಿದರೆ ಇಡೀ ಸಮಾಜ ಅವಳ ಮೇಲೆ ಮುಗಿಬೀಳುತ್ತಿತ್ತು. ಹಾಗಾಗಿ ಮಾಧವಿ ನಿರಂತರವಾಗಿ ಶೋಷಣೆಗೆ ಒಳಗಾಗುತ್ತಾಳೆ.

ಒಂದೆಡೆ ಪುರುಷನಿಂದ ಇನ್ನೊಂದೆಡೆ ಸ್ತ್ರೀಯಿಂದ ಮಾಧವಿ ಶೋಷಣೆಗೆ ಒಳಗಾಗುತ್ತಾಳೆ. ಮಾಧವಿಯ ಚಿಕ್ಕಮ್ಮ ಮಾಧವಿಯ ದಾನವನ್ನು ಆಕ್ಷೇಪಿಸಿದ್ದಲ್ಲಿ ಯಯಾತಿ ಗಾಲವನಿಗೆ ಪರ್ಯಾಯ ವ್ಯವಸ್ಥೆಯನ್ನು ಮಾಡುತ್ತಿದ್ದನೇನೋ ಆದರೆ ಅದು ಹಾಗಾಗಲಿಲ್ಲ ಅಲ್ಲದೆ ಕೆಳವರ್ಗದ ಸ್ತ್ರೀಯರು ಮಾಧವಿಗೆ ಮಿಡಿಯುವಂತೆ ಮೇಲ್ವರ್ಗದ ಸ್ತ್ರೀಯರು ಮರುಗುವುದಿಲ್ಲ. ಹರ್ಯಶ್ವ, ದಿವೋದಾಸ, ಉಶೀನರ ರಾಣಿಯರು ಮಾಧವಿಯ ಸ್ಥಿತಿಗೆ ವ್ಯಥೆಪಡುವುದಿಲ್ಲ. ಅವಳಿಗೆ ಆಗುತ್ತಿರುವ ಅನ್ಯಾಯವನ್ನು ಪ್ರಶ್ನಿಸುವುದೂ ಇಲ್ಲ. ಬದಲಾಗಿ ಅವಳಿಗೆ ಚುಚ್ಚುಮಾತುಗಳನ್ನಾಡಿ ನಿಂದಿಸುತ್ತಾರೆ. ಹೆಣ್ಣಿನ ಮಾತ್ಸರ್ಯವನ್ನು ಕಾದಂಬರಿ ಸೂಕ್ಷ್ಮವಾಗಿ ಪ್ರತಿಬಿಂಬಿಸುತ್ತದೆ.

ಮಾಧವಿಯ ಮೂಲಕ ಅರಮನೆಯ ಸ್ತ್ರೀಯರ ಬದುಕನ್ನು ಕಾದಂಬರಿ ಕಟ್ಟಿಕೊಡುತ್ತದೆ. ಅಂದಿನ ಸಮಾಜ ವ್ಯವಸ್ಥೆಯನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡುತ್ತದೆ. ಇದಕ್ಕೆ ದಿವೋದಾಸ ಮಾಡುವ ಪುತ್ರಕಾಮೇಷ್ಠಿ-ಯಾಗ ಉದಾಹರಣೆ.

'ಮೈಯೆಲ್ಲ ಬೆಳ್ಳಗಿರುವ ಒಂದು ಕಿವಿ ಮಾತ್ರವೇ ಕಪ್ಪಾಗಿರುವ ಎಂಟು ನೂರು ಅಶ್ವಗಳು' ಒಂದೆಡೆ ಸಿಗದೇ ಹೋದಾಗ ಗಾಲವ ಮಾಧವಿಯನ್ನು ಮೂವರು ರಾಜರಿಗೆ ದಾನವಾಗಿ ನೀಡುತ್ತಾನೆ. ಮಾಧವಿಯಿಂದ ಯಥೇಚ್ಚವಾಗಿ ಕಾಮಸುಖವನ್ನು ಅನುಭವಿಸಿ ಗಂಡು ಮಕ್ಕಳನ್ನು ಪಡೆದ ರಾಜರು ಉಸಿರುಯ್ಯುಕೊಳ್ಳಲು ಅವಕಾಶ ಕೊಡದೇ ಒಂದು ವರ್ಷದ ಅವಧಿ ಮುಗಿದ ಕೂಡಲೇ ಗಾಲವನಿಗೆ ಹಿಂದಿರುಗಿಸುತ್ತಾರೆ. ಮಕ್ಕಳಿಗೆ ಹಾಲುಣಿಸಲು ಅವಕಾಶವನ್ನು ಕೊಡುವುದಿಲ್ಲ. ಆರುನೂರು ಕುದುರೆಗಳನ್ನು ಸಂಪಾದಿಸಿದ ಗಾಲವ ಇನ್ನೂರು ಕುದುರೆಗಳು ಸಿಗದೇ

ಹೋದಾಗ ಗುರುಗಳಿಗೆ ಅವಳನ್ನು ದಾನಮಾಡುತ್ತಾನೆ. ಅವನು ಕೂಡ ಮಗುವಿನ ಮೇಲೆ ಮಾಧವಿಗೆ ಯಾವ ಹಕ್ಕು ಇಲ್ಲವೆಂದೇ ಹೇಳುತ್ತಾನೆ. "ನೀನು ಬರೀ ಪಾತ್ರವಾಗಿದ್ದೋಳು. ಜೀವಕ್ಕೆ ಬೇರು ಮುಖ್ಯ. ಬೇರು ಬೆಳೆಯೋವರ್ಗೂ ಮಣ್ಣುಬೇಕು. ಆಮೇಲೆ ಒಂದು ಮಣ್ಣಿನಿಂದ ಇನ್ನೊಂದಕ್ಕೆ ಬದಲಾಯಿಸಿದ್ರೂ ಬೇರು ಜೀವಂತವಾಗೇ ಇರುತ್ತೆ. ನೀನು ಬರೀಮಣ್ಣು. ಮಣ್ಣಿಗೆ ಚಿಗುರಿನ ಮೇಲೆ ಅಧಿಕಾರವಿಲ್ಲ" ಎಂಬ ವಿಶ್ವಾಮಿತ್ರನ ಮಾತು ಅಂದಿನ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀಯ ಸ್ಥಾನವೇನಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಮಾಧವಿಯ ಸ್ಥಿತಿಯನ್ನು ಕಂಡ ಯಯಾತಿ ಪಾಪಪರಿಹಾರ್ಥವಾಗಿ ಸ್ವಯಂವರವನ್ನು ಏರ್ಪಡಿಸುತ್ತಾನೆಯೇ ಹೊರತು ದುಃಖಿಸುವುದಿಲ್ಲ. ತಂದೆಕೊಟ್ಟ ಅಂತಿಮ ಘಳಿಗೆಯ ಸ್ವತಂತ್ರ ಅರ್ಥಹೀನವಾಗಿ ಕಂಡರೂ ಪುರುಷಕುಲವನ್ನು ಕ್ಷಮಿಸಿ ಕ್ಷಮಾಯಧರಿತ್ರಿಯಾಗುತ್ತಾಳೆ ಎಲ್ಲರನ್ನು ತ್ಯಜಿಸಿ ಹೊರಟುಹೋಗುತ್ತಾಳೆ. ಅಂತಿಮ-ವಾಗಿ ವೈಯಕ್ತಿಕ ಗೆಲವು ಅವಳದಾಗುತ್ತದೆ. ಪುರಾಣದ ಸ್ತ್ರೀ ಬಂಡೇಳವುದು, ಸಮಾಜದ ವೈಜ್ಞಾನಿಕ ವಿಶ್ಲೇಷಣೆ ಕಾದಂಬರಿಯ ವಿಶೇಷ ವಿಶ್ಲೇಷಣೆಯಾಗಿದೆ.

ಕುರುಕ್ಷೇತ್ರ ಯುದ್ಧಕ್ಕೆ ಯಾರು ಕಾರಣ? ಎಂಬ ಪ್ರಶ್ನೆಯ ಹಿನ್ನಲೆಯಲ್ಲಿ ಮೂಡಿಬಂದಿರುವ ಜಯ ಅತ್ಯಂತ ಸುಂದರವಾದ ಕಾದಂಬರಿ ಆಧುನಿಕ ಸ್ತ್ರೀವಾದಿ ಕೇಟ್ ಮಿಲೆಟ್ ರೂಪಿಸುವ 'ಲೈಂಗಿಕ ರಾಜಕಾರಣ' ಎಂಬ ಪರಿಕಲ್ಪನೆಗೆ ಸಂವಾದಿಯಾಗಿರುವ 'ಪುರುಷರಾಜಕಾರಣ' ಎಂಬ ಪರಿಕಲ್ಪನೆಯ ಮೂಲಕ ಸ್ತ್ರೀ-ಪುರಷ ಸಂಬಂಧಗಳೇ ಕುರುಕ್ಷೇತ್ರ ಯುದ್ಧಕ್ಕೆ ಕಾರಣ ಎಂದು ಪ್ರತಿಪಾದಿಸುತ್ತದೆ. ಪುರುಷರಾಜಕಾರಣದಿಂದ ನಲಗುವ ಸ್ತ್ರೀಯರ ಬದುಕನ್ನು ಹೇಳುತ್ತದೆ. ನಿರ್ಲಕ್ಷ್ಯಕ್ಕೆ ಒಳಗಾಗುವ ಶ್ರೀ ಸಾಮಾನ್ಯರ, ಸಾಮಂತ ರಾಜರುಗಳ ಬದುಕನ್ನು ಅರಿವಿನ ಕಣ್ಣುಗಳಿಂದ ನೋಡುತ್ತದೆ. ಇಲ್ಲಿ ಸ್ತ್ರೀ ಪಾತ್ರಗಳು ಒಬ್ಬರನ್ನೊಬ್ಬರು ಪ್ರೀತಿಸುತ್ತವೆ, ಸಾಂತ್ವಾನದ ಮಳೆಗರೆಯುತ್ತವೆ. ಸ್ತ್ರೀಯರಲ್ಲಿ – ಪುರುಷ ಗುಣವು, ಪುರುಷನಲ್ಲಿ ಸ್ತ್ರೀ ಗುಣವು ಇರುವುದನ್ನು ಪ್ರತಿಪಾದಿಸುತ್ತದೆ. ಇದಕ್ಕೆ ಭೀಷ್ಮನ ಪಾತ್ರ ಉತ್ತಮ ಉದಾಹರಣೆ. ಪುರುಷ ರಾಜಕಾರಣದಿಂದ ಸಮಾಜದ ಬೆಳವಣಿಗೆಗೆ ಸ್ವಾಸ್ಥ್ಯಕ್ಕೆ ಆಗುತ್ತಿರುವ ಹಾನಿಯನ್ನು ಅನಾವರಣ ಮಾಡುತ್ತದೆ. ಎಲ್ಲರನ್ನು ಸೋದರ ಎಂದು ಸಂಬೋಧಿಸುವ ಕರ್ಣನಂತವನು ದ್ರೌಪದಿಯ ಬಗ್ಗೆ ಹದ್ದು ಮೀರಿ ವರ್ತಿಸುವ ರೀತಿ ಒಳ್ಳೆಯ ವ್ಯಕ್ತಿಯನ್ನೂ ಭ್ರಷ್ಟರನ್ನಾಗಿಸುವ ಪರಿಯನ್ನು ಹೇಳುತ್ತದೆ. ಎಲ್ಲವೂ ನಾಶವಾಗಿಲ್ಲ, ನಿರಕರಣೆಯ ಮೂಲಕ ಹೊಸ ಮೌಲ್ಯಗಳನ್ನು ಕಟ್ಟಿಹಾಕುವ ಒಂದು ಸೂಕ್ಷ್ಮ ಪ್ರಯತ್ನವನ್ನು ನಾವು ಕಾದಂಬರಿಯಲ್ಲಿ ಕಾಣಬಹುದಾಗಿದೆ. ಯುದ್ಧವನ್ನು ವಿರೋಧಿಸಿ ಎಲ್ಲವನ್ನು ಹಂಚಿಕೊಂಡು ಬದುಕೋಣ ಎಂದು ಹೇಳುವ ಉತ್ತರಕುಮಾರ

ವೀರಸ್ವರ್ಗವನ್ನು ನಿರಾಕರಿಸುತ್ತಾನೆ. ದ್ರೌಪದಿ ಪಟ್ಟಾಭಿಷೇಕವನ್ನು ನಿರಾಕರಿಸುತ್ತಾಳೆ. ಕುಂತಿ ಸೊಸೆಯ ನಿರ್ಧಾರದಲ್ಲಿ ಹಸ್ತಕ್ಷೇಪ ಮಾಡುವುದಿಲ್ಲ.

ಯುದ್ಧದಿಂದ ಎಲ್ಲವೂ ನಾಶವಾದಾಗ ಸಹಜವಾಗಿಯೇ ಇದು ಯಾರ ಜಯ ಎಂಬ ಪ್ರಶ್ನೆ ಮೂಡುವಂತೆ ಮಾಡುತ್ತದೆ. 'ಜಯ– ಅಪಜಯ', 'ನೀತಿ–ಅನೀತಿ', 'ಧರ್ಮ–ಅಧರ್ಮ' ಇತ್ಯಾದಿಗಳು ಸತ್ಯವಲ್ಲ ತ್ರಿಕಾಲಬಾಧಿತ 'ಸತ್ಯ'ಗಳಲ್ಲ ಅವುಗಳ ನಿಷ್ಪತ್ತಿ ಅಧಿಕಾರದಲ್ಲಿರುವ ಆಳುವ ವರ್ಗಗಳನ್ನಾಧರಿಸಿ ಬದಲಾಗುತ್ತಾ ಹೋಗುತ್ತದೆ ಎಂಬ ಪ್ರಸ್ತುತವಾಗಿರುವ ಸತ್ಯವನ್ನು ದಟ್ಟ ವಿಷಾದದಿಂದ ಪರಿಣಮಕಾರಿಯಾಗಿ 'ಜಯ' ಕಾದಂಬರಿ ನೀಡುತ್ತದೆ. ನೀನೊಂದು ವಸ್ತುವೆಂದು ಹೆಣ್ಣನ್ನು ಈ ಸಾಮಾಜಿಕ ವಾತಾವರಣವು ಎಷ್ಟೇ ನಿರ್ಬಂಧಿಸಿದ್ದರೂ ಹೆಣ್ಣು ತನ್ನೊಳಗಿನ ಜೀವ ಸೆಲೆಯ ರಭಸವನ್ನು ಅದುಮಿ ಹಿಡಿಯಲಾರಳು. ಅದನ್ನು ಮುಕ್ತವಾಗಿ ಹರಿದು ಬಿಡುವ ಸಂದರ್ಭಗಳಿಗಾಗಿ ಅವಳು ಹಾತೊರೆಯುತ್ತಾಳೆ ಎಂಬುದನ್ನು ಈ ಎರಡೂ ಕಾದಂಬರಿಗಳಲ್ಲಿ ನಾವು ಕಾಣಬಹುದಾಗಿದೆ.

ಇಂದಿನ ಮಹಿಳೆಯರ ಸ್ಥಿತಿಯೇನು ಅಂಥ ಗುಣಮಟ್ಟದ್ದಾಗಿಲ್ಲ. ದಿನಬೆಳಗಾದರೆ ಪುರುಷನಿಂದ, ಸ್ತ್ರೀಯಿಂದ ನಿರಂತರ ಶೋಷಣೆಗೆ ಒಳಗಾಗುತ್ತಿದ್ದಾಳೆ. ಇದನ್ನು 'ಮಹಿಳಾ ಬ್ರಾಹ್ಮಣ್ಯ'ವೆಂದೇ ಧರಣಿದೇವಿ ಮಾಲಗತ್ತಿಯವರು ಹೇಳುತ್ತಾರೆ. ಅಂದರೆ ಮಹಿಳಾ ಬ್ರಾಹ್ಮಣವೆಂಬುದು ಗಂಡು ಮತ್ತು ಹೆಣ್ಣುಗಳಿಗೆ ಸಂಬಂಧಿಸಿದ್ದಾಗಿದೆ. ಒಡೆದು ಆಳುವ ನೀತಿಯನ್ನು ಹೇಳುತ್ತದೆ. ಹೆಣ್ಣು ಹೆಣ್ಣನ್ನೇ ಒಡೆದು ಆಳುವ ನೀತಿ ಸಂಹಿತೆಯನ್ನು ಹೊಂದಿದ್ದಾಳೆ. ಇದರಂತೆ ಗಂಡೂ ಹೆಣ್ಣನ್ನು ಒಡೆದು ಆಳುವ ನೀತಿ ಸಂಹಿತೆಯನ್ನು ಹೊಂದಿದ್ದಾನೆ. ಹಾಗೆಯೇ ಹೆಣ್ಣು – ಗಂಡುಗಳಿಬ್ಬರೂ ಸೇರಿ ಹೆಣ್ಣಿನ ಬದುಕನ್ನು ಒಡೆದು ಆಳುವ ನೀತಿ ಸಂಹಿತೆಯನ್ನು ಹೊಂದಿದ್ದಾರೆ.

ಅತ್ತೆ ಸೊಸೆಯರ ಸಂಬಂಧದಲ್ಲಿ 'ಸೊಸೆ' ಹೊರಗಿನವಳಾಗಿ ಬಿಡುವ ಪ್ರಕ್ರಿಯೆ ಹೆಚ್ಚಿನ ಕಡೆಗಳಲ್ಲಿದೆ. ತನ್ನ ಮಗಳನ್ನು ನೋಡುವ ಹಾಗೆ, ಮಗಳ ಜೊತೆ ವ್ಯವಹರಿಸುವ ಹಾಗೆ, ಅತ್ತೆ ಸೊಸೆಯ ಜೊತೆ ವ್ಯವಹರಿಸುವುದಿಲ್ಲ. ಸೊಸೆ ಎಲ್ಲಿ ನನ್ನನ್ನು ನನ್ನ ಮಗನಿಂದ ದೂರ ಮಾಡುತ್ತಾಳೋ ಎಂಬ ಭಯ ಸೊಸೆಯೇನೂ ಇದಕ್ಕೆ ಹೊರತಲ್ಲ ಹೀಗೆ ಸಂಬಂಧಗಳಲ್ಲಿ ಏರ್ಪಾಡಾಗುವ ಭಿನ್ನತೆ ಸ್ತ್ರೀ ಶೋಷಣೆಗೆ ಸ್ತ್ರೀಯಿಂದಲೇ ಆಗುವ ಕಾರಣಗಳಾಗಿವೆ ಅಲ್ಲದೆ ಸಾರ್ವಜನಿಕ ವಲಯಗಳಲ್ಲಿ, ಕಛೇರಿಗಳಲ್ಲಿ ಕಾಲೇಜುಗಳಲ್ಲಿ, ಶಾಲೆಗಳಲ್ಲಿ ಪುರುಷನಿಂದ ಸ್ತ್ರೀ ಲೈಂಗಿಕ ಕಿರುಕುಳವನ್ನು ಅನುಭವಿಸುತ್ತಿದ್ದಾಳೆ. ಅಲ್ಲದೆ ಮಾಧ್ಯಮಗಳಲ್ಲಿ ವ್ಯಾಪಾರದ ಸರಕಾಗಿದ್ದಾಳೆ.

ಹೆಣ್ಣಿಗೆ ಸ್ವಂತ ವ್ಯಕ್ತಿತ್ವವಿದೆ ಎನ್ನುವ ತಿಳುವಳಿಕೆಯನ್ನು ಹೊಂದುವುದು ಮಾನವೀಯ ಘಟನೆಯ ಮುಖ್ಯಾಂತ ಎಂಬ ತಾತ್ವಿಕ ನೆಲೆಯ ಹಿನ್ನೆಲೆಯಲ್ಲಿ ಈ

ಎರಡೂ ಕಾದಂಬರಿಗಳ ವಿವಿಧ ಪಾತ್ರಗಳು ಮತ್ತು ವಸ್ತುವನ್ನು, ಸಾಮ್ಯತೆ, ಭಿನ್ನತೆಯನ್ನು ಸ್ತ್ರೀವಾದದ ಹಿನ್ನಲೆಯಲ್ಲಿ ನೋಡುವುದು ನಿಬಂಧದ ಮುಖ್ಯ ಉದ್ದೇಶವಾಗಿತ್ತು.

ಅಧ್ಯಯನದ ಮಿತಿಯಲ್ಲಿ ಹಾಗೂ ಕೃತಿಗಳ ಅರ್ಥಪೂರ್ಣ ಗ್ರಹಿಕೆಯ ಪರಿಧಿಯಲ್ಲಿ ಹಿಡಿದಿರುವ ಕಿರು ಪ್ರಯತ್ನ ಇದಾಗಿದೆ. ಒಟ್ಟಾರೆಯಾಗಿ ಸಮಕಾಲೀನ ಸ್ಪಂದನವಾಗಿ ಮೂಡಿಬಂದಿರುವ 'ಮಾಧವಿ' ಮತ್ತು 'ಜಯ' ಕಾದಂಬರಿಗಳಲ್ಲಿ ಕಾದಂಬರಿಕಾರರು ಚಿತ್ರಿಸ ಹೊರಟಿರುವ ಹಾಗೂ ಅಭಿವ್ಯಕ್ತಿಸಲು ಪ್ರಯತ್ನಿಸಿರುವ ಮತ್ತು ಮಹಾಭಾರತವನ್ನು ಗ್ರಹಿಸುವ ಪ್ರಯತ್ನ ಇದಾಗಿತ್ತು.

# ಅನುಬಂಧ – ೧

## ಅನುಪಮ ನಿರಂಜನ ಅವರ ಕೃತಿ ಮತ್ತು ಪ್ರಶಸ್ತಿಗಳ ವಿವರ

| | | |
|---|---|---|
| ಕಾದಂಬರಿ | : | ಅನಂತಗೀತ, ಆಳ, ದಿಟ್ಟ ಸಂಕೋಲೆಯೊಳಗಿಂದ, ಶ್ವೇತಾಂಬರಿ, ಚಿತ್ತಮೋಹನ, ನೂಲುನೆಯ್ದ ಚಿತ್ರ, ಘೋಷ, ಹಿಮದ ಹೂ, ಸ್ನೇಹಪಲ್ಲವಿ, ಹೃದಯ ವಲ್ಲಭ, ಆಕಾಶಗಂಗೆ, ಸಸ್ಯಶ್ಯಾಮಲಾ, ಋಣ, ಮೂಡಣ ಪಡುವಣ, ಕಣಿವೆಗೆ ಬಂತು ಬೇಸುಗೆ, ಪರೀಕ್ಷೆ, ನಟಿ, ಎಳೆ, ಸೇವೆ, ಕೊಳಚೆ ಕೊಂಪೆಯ ದಾನಿಗಳು, ಮುಕ್ತಿಚಿತ್ರ, ಮೂಲಮುಖ ಇತ್ಯಾದಿ |
| ಕಥಾಸಂಕಲನ | : | ಕಣ್ಮಣಿ, ರೂವಾರಿಯ ಲಕ್ಷ್ಮಿ, ನೀರಿಗೆ ನೈದಿಲೆ ಶೃಂಗಾರ, ಏಳುಸುತ್ತಿನ ಮಲ್ಲಿಗೆ, ಗಿರಿಧಾಮ, ಒಡಲು, ಪುಷ್ಪಕ, ಒಂದುಗಿಣಿಯ ಕಥೆ |
| ಆತ್ಮಕಥನ | : | ನೆನಪು : ಸಿಹಿಕಹಿ ಬರಹಗಾರ್ತಿಯ ಬದುಕು |
| ಶಿಶುಸಾಹಿತ್ಯ | : | ದಿನಕ್ಕೊಂದು ಕಥೆ |
| ವೈದ್ಯಕೀಯ | : | ಕೆಂಪಮ್ಮನ ಮಗು, ತಾಯಿ–ಮಗು, ಆರೋಗ್ಯದರ್ಶನ, ಕೇಳು ಕಿಶೋರಿ, ಸ್ತ್ರೀಸ್ವಾಸ್ಥ್ಯ ಸಂಹಿತೆ, ಆರೋಗ್ಯಭಾಗ್ಯಕ್ಕೆ ವ್ಯಾಯಾಮ, ಶಿಶುವೈದ್ಯ ದೀಪಿಕೆ, ಆಹಾರದಿಂದ ಆರೋಗ್ಯ, ಕ್ಯಾನ್ಸರ್ ಜಗತ್ತು, ಒತ್ತಡದ ಬೇನೆಗಳು. |
| ಪ್ರವಾಸ ಕಥನ | : | ಸ್ನೇಹಯಾತ್ರೆ, ಅಂಗೈಯಲ್ಲಿ ಯುರೋ ಅಮೆರಿಕ |
| ವನಿತಾವಾಣಿ | : | ಶುಭಕಾಮನೆ, ಮಾನಿನಿ |
| ದಾಂಪತ್ಯಕಲೆ – ವಿಜ್ಞಾನ | : | ದಾಂಪತ್ಯ ದೀಪಿಕೆ, ವಧುವಿಗೆ ಕಿವಿಮಾತು |
| ಪ್ರಶಸ್ತಿಗಳು | : | ೧೯೭೭ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ<br>೧೯೭೭ರಲ್ಲಿ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ<br>೧೯೮೩ರಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ<br>೧೯೮೭ರಲ್ಲಿ ನಂಜನಗೂಡು ತಿರುಮಲಾಂಬ ಪ್ರಶಸ್ತಿ |

## ಎಂ.ಎಸ್.ವೇದಾ ಅವರ ಕೃತಿ ಮತ್ತು ಪ್ರಶಸ್ತಿಗಳ ವಿವರ

ಕವನಸಂಕಲನಗಳು :

| | | |
|---|---|---|
| ಕಾವ್ಯಕೂಸು | – | ೧೯೮೫ |
| ಗಂಗೋತ್ರಿಯಲ್ಲಿ | – | ೧೯೮೭ |
| ಬಿಳಲುಗಳು | – | ೧೯೮೯ |
| ದಾಖಲಾಗುವುದು ಬೇಡ | – | ೨೦೦೪ |

**ಕಥಾಸಂಕಲನಗಳು :**

| | | |
|---|---|---|
| ಪ್ರೀತಿ ಮತ್ತು ಸಾವು | – | ೧೯೯೩ |
| ಪಾಲು | – | ೧೯೯೭ |
| ಬಿಳಿಯೆಣ್ಣು ಮತ್ತು ದುಂಡವ್ವನ ದೆವ್ವ | – | ೨೦೦೨ |

**ಕಾದಂಬರಿಗಳು**

| | | |
|---|---|---|
| ಜಮೀನು | – | ೨೦೦೦ |
| ಜಯ | – | ೨೦೦೪ |

**ಮನೋಗ್ರಾಫ್**

**ಚದುರಂಗ : ಬದುಕು ಮತ್ತು ಬರಹ – ೨೦೦೧**

**ಸಂದಿರುವ ಪುರಸ್ಕಾರಗಳು:**

೧) ಗಂಗೋತ್ರಿಯಲ್ಲಿ ಎಂಬ ಕವನಸಂಕಲನಕ್ಕೆ ಅಖಿಲ ಕರ್ನಾಟಕ ಲೇಖಕಿಯರ ಸಂಘದ ಗೀತಾ ದೇಸಾಯಿ ದತ್ತಿನಿಧಿ ಪ್ರಶಸ್ತಿ.

೨) ಪ್ರೀತಿ ಮತ್ತು ಸಾವು ಎಂಬ ಕಥಾಸಂಕಲನಕ್ಕೆ ಅಖಿಲ ಕರ್ನಾಟಕ ಲೇಖಕಿಯರ ಸಂಘದ ಎಚ್.ವಿ.ಸಾವಿತ್ರಮ್ಮ ದತ್ತಿನಿಧಿ.

೩) ಜಮೀನು ಕಾದಂಬರಿಗೆ ಗುಲ್ಬರ್ಗಾದ ಎಸ್.ಆರ್.ಪಾಟೀಲ್ ಪ್ರತಿಷ್ಠಾನದ ಮಾಣಿಕಭಾಯಿ ಪ್ರಶಸ್ತಿ, ಬೆಂಗಳೂರು ಗೊರೂರು ಪ್ರತಿಷ್ಠಾನದ ಗೊರೂರು ಸಾಹಿತ್ಯ ಪ್ರಶಸ್ತಿ, ಹಾವೇರಿಯ ಹಾವನೂರು ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಲೇಖಕಿಯರ ಉತ್ತಮ ಕಾದಂಬರಿ ಪ್ರಶಸ್ತಿ.

# ಅನುಬಂಧ - ೨

## ಗ್ರಂಥಋಣ


೧. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ : ಸಂಪಾದಕರು: ಡಾ. ಎಚ್.ಎಸ್.ಶ್ರೀಮತಿ
ಪ್ರಕಾಶಕರು: ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್
ನಿರ್ದೇಶಕರು, ಪ್ರಸಾರಾಂಗ ಕನ್ನಡ
ವಿಶ್ವವಿದ್ಯಾನಿಲಯ
ಹಂಪಿ, ವಿದ್ಯಾರಣ್ಯ - ೫೮೩೨೭೬
ವರ್ಷ - ೨೦೦೬

೨. ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ : ಪ್ರಧಾನ ಸಂಪಾದಕರು:
ಬರಗೂರು ರಾಮಚಂದ್ರಪ್ಪ
ಪ್ರಕಾಶಕರು:
ವಿ.ಎನ್.ಮಲ್ಲಿಕಾರ್ಜುನಸ್ವಾಮಿ
ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡಮಿ
ಕನ್ನಡ ಭವನ, ಜೆ.ಸಿ.ರಸ್ತೆ,
ಬೆಂಗಳೂರು - ೫೬೦ ೦೦೨
ವರ್ಷ - ೧೯೯೩.

೩. ಜಯ : ಎಂ.ಎಸ್.ವೇದಾ
ಸಂವಹನ:
ಈವನ್ನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು -೧
ವರ್ಷ - ೨೦೦೪.

೪. ಪುರಾಣ ಚೂಡಾಮಣಿ : ಸಂಪಾದಕರು: ಬೆನಗಲ್ ರಾಮರಾವ್
ಪಾವ್ಯಂ ಸುಂದರಶಾಸ್ತ್ರೀ
ಮುದ್ರಕರು: ಜಿ.ಎಚ್.ರಾಮರಾವ್, ಬಿ.ಎಸ್.ನಿ.,
ಮೈಸೂರು ಪ್ರಿಂಟಿಂಗ್ ಪಬ್ಲಿಷಿಂಗ್ ಹೌಸ್
ಮೈಸೂರು, ವರ್ಷ-೧೯೫೯.

೫. ಎಂ.ಎಸ್.ವೇದಾ ಅವರ ಜಯ : ಆಂದೋಲನ ದಿನಪತ್ರಿಕೆ (ಹಾಡುಪಾಡು ವಿಭಾಗ)
ಡಾ. ಎನ್.ಕೆ.ಕೋದಂಡರಾಮ
೨೫.೦೬.೨೦೦೬

೬. ಮಾಧವಿ : ಡಾ. ಅನುಪಮಾ ನಿರಂಜನ
ಡಿ.ವಿ.ಕೆ.ಮೂರ್ತಿ, ಪ್ರಕಾಶಕರು: ಮೈಸೂರು-೪
ವರ್ಷ - ೧೯೭೬.

೭. ವಚನಭಾರತ : ಎ.ಆರ್.ಕೃಷ್ಣಶಾಸ್ತ್ರಿ, ಗೀತಾಬುಕ್‌ಹೌಸ್,
ಪ್ರಕಾಶಕರು, ಮೈಸೂರು-೫೭೦ ೦೦೧,
ವರ್ಷ -೨೦೦೩.

೮. ಶಬ್ದರೇಖೆ : ಕೇಶವಶರ್ಮ
ಅಭಿನವ
೨೭೯೧, ೧೩ನೆಯ ಮುಖ್ಯರಸ್ತೆ 'ಇ' ವಿಭಾಗ,
ರಾಜಾಜಿನಗರ
೨ನೆಯ ಹಂತ, ಬೆಂಗಳೂರು – ೫೬೦೦೧೦,
ವರ್ಷ ೧೯೯೮.

೯. ಸಾಲು ದೀಪಗಳು : ಸಂಪಾದಕರು: ಜಿ.ಎಸ್.ಸಿದ್ಧಲಿಂಗಯ್ಯ ಮತ್ತು
ಎಂ.ಎಚ್.ಕೃಷ್ಣಯ್ಯ, ಕರ್ನಾಟಕ ಸಾಹಿತ್ಯ
ಅಕಾಡಮಿ, ಬೆಂಗಳೂರು–೦೭
ವರ್ಷ – ೨೦೦೧.

೧೦. ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ : ಸಾರಾ ಅಬೂಬಕ್ಕರ್ ಪ್ರಕಾಶಕರು
ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
ವರ್ಷ – ೨೦೦೭.

೧೧. ಸಾಹಿತ್ಯ ತರಂಗ : ದ್ವಿತೀಯ ಪಿ.ಯು.ಸಿ.
ಕನ್ನಡ ಪಠ್ಯಪುಸ್ತಕ, ಮುದ್ರಕರು ಮತ್ತು
ಪ್ರಕಾಶಕರು
ನಿರ್ದೇಶಕರು, ಮುದ್ರಣ ಲೇಖನ ಸಾಮಾಗ್ರಿ
ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು,
ವರ್ಷ, ೧೯೯೬

೧೨. ಸ್ತ್ರೀವಾದಿ ಹಿನ್ನೆಲೆಯಿಂದ ಕನ್ನಡ ಮತ್ತು ತಮಿಳು ಮಹಿಳಾ ಸಾಹಿತ್ಯದ ಅಧ್ಯಯನ : ಎಂ.ರಂಗಸ್ವಾಮಿ
ಪಿಎಚ್.ಡಿ. ಮಹಾಪ್ರಬಂಧ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು, ವರ್ಷ – ೨೦೦೬

೧೩. ಸ್ತ್ರೀವಾದ ಮತ್ತು ಭಾರತೀಯತೆ : ಧರಣೀದೇವಿ ಮಾಲಗತ್ತಿ
ಚೇತನಬುಕ್ ಹೌಸ್
ರೇಣುಕಾಚಾರ್ಯ ದೇವಸ್ಥಾನದ ರಸ್ತೆ
(ಲಕ್ಷ್ಮಿ ಟಾಕೀಸ್ ಹಿಂಭಾಗ)
ಮೈಸೂರು – ೫೭೦ ೦೨೪
ವರ್ಷ – ೧೯೯೮

೧೪. ಎಸ್.ಎಲ್.ಭೈರಪ್ಪ ಅವರ ಪರ್ವ : ಒಂದು ತೌಲನಿಕ ಅಧ್ಯಯನ : ಕೆ.ಮಾಲತಿ
ಪಿಹೆಚ್.ಡಿ. ಮಹಾಪ್ರಬಂಧ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು
ವರ್ಷ – ೨೦೦೬

*****

